

# INAUGURAL CEREMONY

Shree Kashi Math Samsthan, Varanasi



# Shrimad Bhuvanendra Ayurvedic Vriksha Vatika



**ON: 06-11-2016** **Muhurtham : 12:00 P.M** **Venue: Bhagamandala**



The formal inauguration of **"Shrimad Bhuvanendra Ayurvedic Vriksha Vatika"** at Bhagamandala (Coorg) is to be performed on 06-11-2016 (Sunday) along with the installation of the idol of **Shrimad Bhuvanendra Thirta Swamiji** by the divine hands of **Shrimad Samyameendra Thirta Swamiji** the Matadhipathi of Shree Kashi Math Samsthan.

**All devotees are invited for this holy ritual and requested to extend co operation and active participation in maintaining and preserving this noble project.**

**For more details contact :** Radhakrishna Bhaktha : **9448120395** H. Gajanana Kamath : **9447190212**
**For Accomodation contact:** Ganesh Shenoy: **9448433183** H. Guruprasad Kamath : **9447100548** M. Ramanath Shenoy : **9447204454**




# ಹೋರ್ತುಸ್ ಮಲಬಾರಿಕುಸ್, ಆಯುರ್ವೇದ ಮತ್ತು ಕೊಂಕಣಿಗರ ಕೊಡುಗೆ

ಸಂಪಾದಕರು :
ಪಯ್ಯನ್ನೂರು ರಮೇಶ್ ಪೈ




ಪಿ.ಜಿ.ಕಾಮತ್ ಫೌಂಡೇಶನ್
ಎರಣಾಕುಳಂ
2016



Kannada

# HORTUS MALABARICUS, AYURVEDA MATTU KONKANIGARA KODUGE

(Collection of Essays)

Edited by :
**Payyanur Ramesh Pai**



First Edition : November 2016

***Published by :***
**P. G. Kamath Foundation**
'Puduma', Parinamam Road,
Kaloor, Ernakulam,
**KOCHI - 682 017 [Kerala State]**
Cell : 9447730866
e-mail: pgkamat.foundation@gmail.com
www.pgkamathfoundation.com

***Typesetting by :***
Sri Ganeswara Graphics,
ERNAKULAM - 682 026

***Printed at :***
Ayodhya Printers,
ERNAKULAM - 682 026
Copies 500

₹ 60





# ಸಮರ್ಪಣೆ



SHRIMAD BHUVANENDRA THEERTHA SWAMIJI

ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿಯವರಿಗೆ





# H.H. SHRIMAD SAMYAMINDRA TIRTHA SWAMI

**MATADHIPATHI OF SHREE KASHI MATH SAMSTHAN, VARANASI**

Camp : Sri Lakshmi Venkatesh Temple
Hosdurg, Kanhangad

Ref. : 1006

Date : 31.10.2016

Blessings to our beloved Disciple, Anand G Kamath, Trustee, P.G.Kamath Foundation, Ernakulam with meditations of Lord Sri Narayana.

We have received your Vinantipatram dated 26.10.2016 and happy to note that you are publishing a book "Hortus Malabaricus, Ayurveda and contribution of Konkanis" in Kannada language and received kanikyam of Rs.251/= by cash.

With Prayers to Shree VyasaRaghupathi for the success in your endeavours of publication and for the welfare and prosperity of you all. We are sending our blessings along with Shreegandhaprasadakshatham.

*Once more with Hearty Blessings.*

## Publisher's Note

We have great pleasure in publishing this book - ಹೋರ್ತುಸ್ ಮಲಬಾರಿಕುಸ್, ಆಯುರ್ವೇದ ಮತ್ತು ಕೊಂಕಣಿಗರ ಕೊಡುಗೆ - a handbook for the benefit of common man giving insight into the botanical encyclopedia 'Hortus Malabaricus' published during 1678-1693. It is an epoch making work - first block printing in Konkani language as well as Malayalam. Three Konkani Vaidyas from Kochi have contributed great to the Latin book in 12 Volumes.

This was our dream when we published the Konkani book -"Hortus Malabaricus: Ek Vollokh" (Devanagari script) in 2015. Now, the dream is coming true, our second book in Kannada, seeing the light of the day from the divine hands of H.H.Srimad Samyamindra Tirtha Swamiji. The august release has more relevance and significance for the occasion, being the inauguration of Shrimad Bhuvanendra Vriksha Vatika, Bhagamandal – the Herbal Garden of Sri Kashi Math Samsthan

This book, first of its kind in Kannada language, is our humble step forward in popularizing the contributions made by our forefathers to Ayurveda in general and Hortus Malabaricus in particular. Earlier we had participated in a Seminar at Goa (2014). We had also actively participated in the project of installing the bust statues of the three Konkani Vaidyas in Kochi (2015).

We are grateful to H.H.Srimad Samyamindra Tirtha Swamiji for blessing our ventures. We place on record our sincere gratitude to all contributors of articles of the book. We acknowledge with thanks the encouragement and persuasion of several Konkani lovers in our endeavours.

**Anand G Kamath**

P.G.Kamath Foundation

# ಸಂಪಾದಕೀಯ

ಕರ್ನಾಟಕದ ಮಲೆನಾಡಿನಲ್ಲಿ ಭಾಗಮಂಡಲದಲ್ಲಿ ಕಾವೇರಿ ನದಿಯ ಉಗಮ ಸ್ಥಾನ ಒಂದು ಪವಿತ್ರ ತೀರ್ಥವೆಂದು ಬಹುಕಾಲದಿಂದಲೇ ವಿಖ್ಯಾತವಾಗಿದೆ. ಇಲ್ಲಿ ಶ್ರೀ ಕಾಶೀಮಠ ಸಂಸ್ಥಾನದ ವತಿಯಿಂದ "ಶ್ರೀ ಭುವನೇಂದ್ರ ಆಯುರ್ವೇದ ವೃಕ್ಷವಾಟಿಕೆ" ರೂಪಗೊಂಡು ಭವಿಷ್ಯದಲ್ಲಿ ಆಯುರ್ವೇದ ಔಷಧಗಳ ನಿರ್ಮಾಣಕ್ಕೆ ಅಗತ್ಯವುಳ್ಳ ಗಿಡಮೂಲಿಕೆಗಳನ್ನು ಬೆಳೆಯಿಸುವ ಬೃಹತ್ತಾದ ಒಂದು ತೋಟವನ್ನು ಸೃಷ್ಟಿಸುವ ಸಂಕಲ್ಪ ಶ್ರೀಮದ್ ಸುಧೀಂದ್ರ ತೀರ್ಥ ಸ್ವಾಮಿಜಿಯವರದ್ದಿತ್ತು. ಅದನ್ನು ಸಾಕ್ಷಾತ್ಕಾರಗೊಳಿಸುವ ಪ್ರಯತ್ನ ಶ್ರೀಮದ್ ಸಂಯಮೀಂದ ತೀರ್ಥ ಸ್ವಾಮಿಜಿಯವರು ಕೈಗೊಂಡು ಕೆಲವೇ ಕಾಲದಲ್ಲಿ ಸಫಲವಾಗುತ್ತಿದೆ.

ಈ ಹರುಷದ ವೇಳೆಯುಲ್ಲಿ ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮಿಜಿಯವರ ಪ್ರತಿಮೆಯ ಅನಾವರಣವೂ ಆಗಲಿದೆ. ಆಯುರ್ವೇದ ತಜ್ಞರಾಗಿದ್ದ ಗುರುಪರಂಪರೆಯ ಶ್ರೇಷ್ಠಯತಿಗಳ ಸ್ಮರಣೆಯಿಂದ ಪಾವನಗೊಳ್ಳುವ ಸಂದರ್ಭದಲ್ಲಿ ನಮ್ಮ ಸಮಾಜದ ಹಿರಿಯ ಮೂವರು ವೈದ್ಯರನ್ನೂ ಸ್ಮರಿಸುವಂತೆ ಹಾಗೂ ಅವರ ಕೊಡುಗೆಯನ್ನು ನೆನಪಿಡುವಂತೆ ನಾವು ಈ ಕಿರು ಹೊತ್ತಗೆಯನ್ನು ಹೊರತರುತ್ತಿದ್ದೇವೆ.

ಇದನ್ನು ಲೋಕಾರ್ಪಣೆ ಮಾಡುವ ಅನುಮತಿಯಿತ್ತ ಶ್ರೀಮದ್ ಸಂಯಮೀಂದ್ರ ತೀರ್ಥ ಸ್ವಾಮಿಜಿಯವರಿಗೆ ನಮ್ಮ ಅನಂತಾನಂತ ಧನ್ಯವಾದವಿದೆ.

ಕನ್ನಡ ಓದುಗರಿಗೆ ಬಹುಶ: ಇದೊಂದು ಹೊಸ ವಿಷಯ ಅಥವಾ ಮಾಹಿತಿ ಇರಬಹುದು. ಈ ಪುಸ್ತಕದಿಂದ ಅಂತಹ ಪ್ರಯೋಜನ ಸಿಕ್ಕಿದರೆ ನಮ್ಮ ಪ್ರಯತ್ನ ಸಾರ್ಥಕವಾಗುವುದು.

ಕೆಲವೇ ದಿನಗಳಲ್ಲಿ ನಮ್ಮ ಕೋರಿಕೆಯನ್ನು ಮಾನ್ಯ ಮಾಡಿ ಲೇಖನಗಳನ್ನು ಕಳುಹಿಸಿ ಸಹಕಾರವಿತ್ತ ಸನ್ಮಾನ್ಯ ಲೇಖಕರೆಲ್ಲರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

– ಪಯ್ಯನ್ನೂರು ರಮೇಶ್ ಪೈ

# ಅನುಕ್ರಮಣಿಕೆ

# ಶ್ರೀ ಕಾಶೀ ಮಠದಿಂದ ಆರೋಗ್ಯ ಕ್ಷೇತ್ರಕ್ಕೆ ಕೊಡುಗೆ

ಮಂಗಳೂರು, ಅ. 4: ಶ್ರೀ ಕಾಶೀ ಮಠ ಸಂಸ್ಥಾನದ ವರ್ತಮಾನ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀಮತ್ ಸುಧೀಂದ್ರತೀರ್ಥ ಶ್ರೀಪಾದಂಗಳವರ ಹಲವಾರು ಸಾಮಾಜಿಕ ಸ್ಪಂದನಗಳಲ್ಲಿ ಆರೋಗ್ಯ ಸೇವೆ ಒಂದು. ಈ ಆರೋಗ್ಯ ಸೇವೆಗೆ ಕೋಟೇಶ್ವರದಲ್ಲಿ ಕಾರ್ಯಾಚರಿಸುತ್ತಿರುವ ಶ್ರೀ ಯಾದವೇಂದ್ರ ಆಯುರ್ವೇದ ವೈದ್ಯಶಾಲಾ ಮತ್ತು ಶ್ರೀ ಭುವನೇಂದ್ರ ಆಯುರ್ವೇದ ಆಸ್ಪತ್ರೆ ಸೇರ್ಪಡೆಗೊಂಡಿವೆ.

ಶ್ರೀಗಳ ಕನಸಿನ - ಮಹತ್ವಾಕಾಂಕ್ಷೆಯ ಯೋಜನೆ ಇದಾಗಿದೆ. ನಮ್ಮ ಮೂಲ ಆರೋಗ್ಯ ಚಿಕಿತ್ಸಾ ಕ್ರಮವಾದ ಆಯುರ್ವೇದ ಪದ್ಧತಿಯನ್ನು ಬೆಳೆಸಿ, ಅರ್ಹ ಫಲಾನುಭವಿಗಳಿಗೆ ಧರ್ಮಾರ್ಥ ಮತ್ತು ರಿಯಾಯಿತಿ ದರದಲ್ಲಿ ಆರೋಗ್ಯ ಸೇವೆ ನೀಡುವುದೇ ಇದರ ಮೂಲ ಉದ್ದೇಶ.

ಶ್ರೀ ಕಾಶೀ ಮಠದ 17ನೇ ಗುರುವರ್ಯರುಗಳಾದ ವೃಂದಾವನಸ್ಥ ಶ್ರೀಮತ್ ಭುವನೇಂದ್ರತೀರ್ಥ ಶ್ರೀಪಾದಂಗಳವರ 100ನೇ ಪುಣ್ಯತಿಥಿ ಆಚರಣೆ ಸುಸಂದರ್ಭ ಶ್ರೀಗಳು ತಮ್ಮ ಆಶೀರ್ವಚನದಲ್ಲಿ, ಆಯುರ್ವೇದದಲ್ಲಿ ವಿಶೇಷ ಪರಿಣತಿ ಪಡೆದ ಶ್ರೀಮತ್ ಭುವನೇಂದ್ರತೀರ್ಥ ಶ್ರೀಪಾದರ ಹೆಸರಿನಲ್ಲಿ ಆಯುರ್ವೇದ ಆಸ್ಪತ್ರೆಯನ್ನು ಬಸ್ರೂರು ಪರಿಸರದಲ್ಲಿ ಆರಂಭಿಸುವಂತೆ ಸೂಚಿಸಿದರು. ಅನಂತರ ಶ್ರೀ ಕಾಶೀ ಮಠದ ಪಟ್ಟಶಿಷ್ಯ ಪರಮಪೂಜ್ಯ ಶ್ರೀಮತ್ ಸಂಯಮೀಂದ್ರತೀರ್ಥ ಶ್ರೀಪಾದಂಗಳವರ ಗಮನಕ್ಕೆ ಈ ವಿಷಯ ಬಂದಾಗ, ಈ ಯೋಜನೆಯ ಪ್ರತಿಫಲ ಬಸ್ರೂರಿಗಿಂತ ಕುಂದಾಪುರ/ಕೋಟೇಶ್ವರದಲ್ಲಿ ಆರಂಭಿಸಿದರೆ ಹೆಚ್ಚು ಜನರಿಗೆ ದೊರೆಯುವುದೆಂದು ಮನಗಂಡು ಈ ಯೋಜನೆಗೆ ಚಾಲನೆ ನೀಡಿದರು.



ಶ್ರೀ ಪಟ್ಟಾಭಿ ರಾಮಚಂದ್ರ ದೇವಳ, ಕೋಟೇಶ್ವರದಿಂದ 16 ಸೆಂಟ್ಸ್ ಜಾಗ ಯೋಜನೆಗೆ ನೀಡಲಾಗಿದೆ. ತನ್ನ ಸಹಸಂಸ್ಥೆ ಶ್ರೀ ಪಟ್ಟಾಭಿ ರಾಮಚಂದ್ರ ಟ್ರಸ್ಟ್ ಕೋಟೇಶ್ವರದ ಮೂಲಕ ಕೋಟೇಶ್ವರದ ಶ್ರೀರಾಮ ಸೇವಾ ಸಂಘ, ಸಮಾಜ ಬಾಂಧವರ ಸಹಯೋಗದಿಂದ ಕಟ್ಟಡ ನಿರ್ಮಿಸಿತು. ಈ ಕಟ್ಟಡವನ್ನು ಶ್ರೀಮತ್ ಸಂಯಮೀಂದ್ರತೀರ್ಥ ಶ್ರೀಪಾದರು ಲೋಕಾರ್ಪಣೆ ಮಾಡಿದರು. ಶ್ರೀಮತ್ ಸುಧೀಂದ್ರತೀರ್ಥ ಶ್ರೀಪಾದರು ವೈದ್ಯಶಾಲೆಗೆ ನಾಮಾಂಕಿತ ಮಾಡಿದರು. ಸ್ವಲ್ಪ ಕಾಲದ ಅನಂತರ ಶ್ರೀ ಭುವನೇಂದ್ರ ಪಂಚಕರ್ಮ ಸೆಂಟರ್ ಆರಂಭಿಸಲಾಯಿತು.

**ವಿಶೇಷತೆ**

■ ಶ್ರೀ ಭುವನೇಂದ್ರ ಚಾರಿಟೆಬಲ್ ಟ್ರಸ್ಟ್ ಕುಂದಾಪುರ ಇದು ಇದರ ದೈನಂದಿನ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುತ್ತದೆ. ■ ಇಲ್ಲಿ ಆಯುರ್ವೇದ ಪದ್ಧತಿಯ ಚಿಕಿತ್ಸೆ ಮಾತ್ರ ಲಭ್ಯ. ■ ತಪಾಸಣೆ ಉಚಿತ. ಪಂಚಕರ್ಮ ಚಿಕಿತ್ಸೆಗೆ ರಿಯಾಯಿತಿ. ■ ವೇಳೆ: ಸೋಮವಾರದಿಂದ ಶನಿವಾರ. ಬೆಳಗ್ಗೆ 9ರಿಂದ ಸಂಜೆ 5ರ ತನಕ. ■ ಇಲ್ಲಿ ಜಾತಿ-ಮತ-ವರ್ಗಗಳ ಭೇದವೇ ಇಲ್ಲ) ಚಿಕಿತ್ಸೆಗೆ ಅನುಭವಿ ಸಿಬಂದಿ (ಪುರುಷ ಮತ್ತು ಮಹಿಳೆಯರು ಸೇರಿದಂತೆ). ■ ಡಾ। ಎಂ. ಎಸ್. ಕಾಮತ್ (ಈ ಹಿಂದೆ ಮಣಿಪಾಲ ಕಸ್ತೂರ್ಬಾ ಆಸ್ಪತ್ರೆಯಲ್ಲಿ ಆಯುರ್ವೇದ ವಿಭಾಗದ ಮುಖ್ಯಸ್ಥರಾಗಿದ್ದು, 33 ವರ್ಷಗಳ ಕಾಲ ಸೇವೆ ಸಲ್ಲಿಸಿದ್ದು, ಈಚೆಗೆ ನಿವೃತ್ತಿ ಹೊಂದಿದ್ದಾರೆ.) ಪ್ರತಿ ಶನಿವಾರ ಸೇವೆಗೆ ಲಭ್ಯರಿದ್ದಾರೆ. ■ ಕೇರಳದ ಚೇರ್ಪುಳಶ್ಶೇರಿಯ ಆಯುರ್ವೇದ ಪಂಡಿತ ಡಾ। ರಾಜೀವ ಶೆಣೈ ಪ್ರತಿ ಶಿಬಿರದಲ್ಲಿ ಸೇವೆ ನೀಡುವುದರೊಂದಿಗೆ ಸಂಸ್ಥೆಯ ಯೋಜನೆ, ಕಾರ್ಯಗಳ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದಾರೆ. ■ ಆಯುರ್ವೇದ ಜನಜಾಗೃತಿಗಾಗಿ ಉಡುಪಿ ಜಿಲ್ಲೆಯ ಬೇರೆ ಬೇರೆ ಕಡೆ ಪ್ರತಿ ತಿಂಗಳಿಗೆ ಒಂದರಂತೆ ಉಚಿತ ಆಯುರ್ವೇದ ತಪಾಸಣೆ ಶಿಬಿರ ಹಾಗೂ ಉಚಿತ ಔಷಧ ವಿತರಣೆ ಕಾರ್ಯಕ್ರಮ. ■ ಒಳರೋಗಿಯಾಗಿ ದಾಖಲಾಗುವ ರೋಗಿಗಳಿಗೆ, ಮೇಲಿನ ಅಂತಸ್ತಿನಲ್ಲಿ ಏಳು ಕೊಠಡಿಗಳ ವ್ಯವಸ್ಥೆ ಸದ್ಯದಲ್ಲಿಯೇ ಲಭ್ಯವಾಗಲಿದೆ. ■ ಭವಿಷ್ಯದಲ್ಲಿ ಹರ್ಬಲ್ ಗಾರ್ಡನ್, ಆಯುರ್ವೇದ ಔಷಧ ತಯಾರಿಕೆ ಘಟಕ ಸ್ಥಾಪನೆಯ ಯೋಜನೆ ಹಾಕಿಕೊಂಡಿದೆ. ■ ಡಾ। ಕಾತ್ಯಾಯಿನಿ ದೈನಂದಿನ ಚಟುವಟಿಕೆಗಳ ಮುಖ್ಯಸ್ಥೆ.

■ ಸಂದೀಪ್ ನಾಯಕ್ ಸುಜೀರ್

## Shrimad Bhuvanendra Ayurvedic Vriksha Vatika

Bhagamandala, the place sanctified by the presence of the great Bhaganda Muni and the seer Agasthya facilitated the contact between North India and South India propagating the Siddha system of medicine, is the confluence of three holy rivers. River Ganga is believed to spring up in the tank of Talakaveri on the Thula Sankramana Day, signifying the unity between the two regions of our country. Our pilgrimage to the Moola Math of the Samsthan of Varanasi in North India is a proof of our intimate relationship with the North.

The illustrious Pontiff of Shree Kashi Math Samsthan have been the ardent protagonists of Ayurveda, demonstrating its effectiveness by practicing it. Many, like Shrimad Bhuvanendra Tirtha Swamiji, belonged in their Purvashram, to the families of great Ayurvedic Physicians and tried to patronize the Ayurveda. Shrimad Bhuvanendra Tirtha Swamiji is considered to be one of the great patrons of Ayurveda. The successors of the Swamiji too evinced great interest in this system of treatment. Sadguru Shrimad Sudhindra Tirtha Swamiji, who shared the intense interest of Shrimad Bhuvanendra Tirtha Swamiji in Ayurveda, wished to establish an Ayurvedic Herbal Garden under the Samsthan to encourage the development of Ayurveda. Though this proposal was considered and discussed for a long time, no concrete steps in this regard were materialized. On the occasion of celebration of the 100th Punyathithi of Shrimad Bhuvanendra Tirtha Swamiji at Basrur, and again at the 125th Puṇyathithi Celebration at Koteshwar, Shrimad Sudhindra Tirtha Swamiji expressed publicly His desire to have the garden established.

Shrimad Samyamindra Tirtha Swamiji, aware of the Guru's great liking and regard for Ayurveda and abiding faith in its efficacy, His wish to have a Herbal Garden established under the Math, has taken up the matter and trying to honor and fulfil the Guru's wish, with commitment and determination as a true Shishya and chosen Bhagamandala in Malnad, for locating this and the project is being executed in right earnest.

The formal inauguration of the "Shrimad Bhuvanendra Ayurvedic Vriksha Vatika" at Bhagamandala (Coorg) is being performed on 06

November 2016 (Sunday) alongwith the installation of the idol of Shrimad Bhuvanendra Tirtha Swamiji by the divine hands of Shrimad Samyamindra Tirtha Swamiji, the Matadhioati of Shree Kashi Math Samsthan.

All devotee are requested for this holy ritual and requested to extend cooperation and active participation in maintaining and preserving this noble project.

May all be blessed by Shree Hari Guru,

**Dr. P. Dayananda Pai**
President
Shrimad Bhuvanendra Tirtha Swami
CharitableTrust (Regd), Kundapur

**Dr. M. Jagannath Shenoy**
President
Kashi Math Vyavasthapak Samithi
Bhagamandal



Shree Kashi Math Samsthan, Varanasi

# shrimad bhuvanendra ayurvedic vriksha vatika

Bhagamandala





Srimad Samyamindra Tirtha Swamiji, Matadhipati of Sri Kashi Math Samsthan visiting Bhagamandal



# ಔಷಧೀಯ ಸಸ್ಯಗಳ ಆರ್ಯುವೇದ ಜ್ಞಾನದ ಕುರಿತು ಒಂದು ಒಳನೋಟ

ಡಾ॥ ಎಂ. ಎಸ್. ಕಾಮತ್



ಆಹಾರ ಮತ್ತು ಔಷಧಗಳ ಉದ್ದೇಶಕ್ಕಾಗಿ ಸಸ್ಯ ಮತ್ತು ಇತರ ಪ್ರಾಕೃತಿಕ ಸಾಮಾಗ್ರಿಗಳನ್ನು ಬಳಸುತ್ತಿರುವುದರ ಕುರಿತು ಆಯುರ್ವೇದವು ಮೂರು ಸಾವಿರಕ್ಕಿಂತಲೂ ಹೆಚ್ಚಿನ ವರ್ಷಗಳ ಇತಿಹಾಸವನ್ನು ದಾಖಲಿಸಿದೆ. ಆಯುರ್ವೇದವು ಜೀವನದ ವಿಜ್ಞಾನವಾಗಿದೆ. ಇದು ಕೇವಲ ಖಾಯಿಲೆ ಗುಣಪಡಿಸುವ ಕ್ರಿಯೆಯನ್ನು ಮಾತ್ರ ನಿರ್ವಹಿಸುವುದಲ್ಲದೇ, ಸಾಮಾನ್ಯನಾದ ಒಬ್ಬ ಆರೋಗ್ಯವಂತ ವ್ಯಕ್ತಿಯ ಸುಸ್ಥಿರ ಬದುಕನ್ನು ಜೀವಿಸುವ ಕಲೆಯಾಗಿಯೂ ಕೂಡ ಬಹಳ ಪ್ರಾಮುಖ್ಯತೆಯನ್ನು ನೀಡುತ್ತದೆ. ಆಯುರ್ವೇದ ಎನ್ನುವುದರ ವ್ಯಾಖ್ಯಾನವು "ಆಯುರ್ವೇದ – ಜೀವನ ವಿಜ್ಞಾನ" ಎಂಬ ರೀತಿಯಲ್ಲಿರುವುದನ್ನು ಗಮನಿಸಿದರೆ, ಆಯುರ್ವೇದವು ವ್ಯಕ್ತಿಯ ಸಂತೋಷದಾಯಕ, ಸುಸ್ಥಿರ ದೃಷ್ಟಿಕೋನದ ಸಮಾಜಕ್ಕೆ ಪೂರಕವಾದ ಸಂಪೂರ್ಣ ಬದುಕನ್ನು ಜೀವಿಸುವುದಕ್ಕೆ ಹೆಚ್ಚು ಮಹತ್ವ ನೀಡುತ್ತದೆ ಎಂಬುವುದು ತಿಳಿಯುತ್ತದೆ. ಇಂದಿನ ಆಧುನಿಕ ಔಷಧ ವ್ಯವಸ್ಥೆ ಎನ್ನುವುದು 2500 ರಿಂದ 3000 ವರ್ಷಗಳ ಹಿಂದಿನಿಂದಲೂ ಪ್ರತಿಪಾದಿಸಲ್ಪಟ್ಟ ಮತ್ತು ಪಾಲಿಸಲ್ಪಟ್ಟ ಜೀವನ ಮಾರ್ಗದ ನೆನಪನ್ನು ಮೆಲುಕುಹಾಕುವ ಸ್ಥಿತಿಯೇ ಆಗಿದೆ.

**ಸಸ್ಯಜ್ಞಾನದ ವ್ಯುತ್ಪತ್ತಿ**

ಔಷಧೀಯ ಉದ್ದೇಶಕ್ಕಾಗಿ ಸಸ್ಯಗಳ ಉಪಯೋಗದ ಕುರಿತಾಗಿ ದೀರ್ಘ ಮತ್ತು ಬೇರ್ಪಡಿಸಲಾಗದ ಇತಿಹಾಸವಿದೆ. ಋಗ್ವೇದದಲ್ಲಿ ಬರುವ (10.97.1–23) 'ಔಷಧೀ ಸೂಕ್ತ'ವು ಭಾರತದಲ್ಲಿ ಔಷಧೀಯ ಸಸ್ಯಗಳ ಬಳಕೆಯ ಬಗೆಗಿನ ಅತೀ ಹಳೆಯ ದಾಖಲೆಯಾಗಿದೆ. ಔಷಧೀಯ ಸಸ್ಯಗಳ ಗುಣ ಲಕ್ಷಣಗಳು, ಬೆಳೆಯುವ ಕಾಲ, ಪ್ರದೇಶ, ಬೇರೆ ಬೇರೆ ಖಾಯಿಲೆಗಳಿಗೆ ಇವುಗಳ ಚಿಕಿತ್ಸಾ ತಂತ್ರಗಳನ್ನೂ ಇದರಲ್ಲಿ ವಿವರಿಸಲಾಗಿದೆ. ವೇದಗಳಲ್ಲಿರುವ ಶ್ಲೋಕ, ಮಂತ್ರಗಳಿಂದ ಔಷಧಿಗಳಿಗೆ ಪ್ರಾರಂಭದಲ್ಲಿ ಸಸ್ಯಗಳ ಉಪಯೋಗವು ಕರಡಿ, ಮುಂಗುಸಿ, ಆಮೆ, ಹಾವು, ದನ ಇತ್ಯಾದಿ ಪ್ರಾಣಿಗಳ ಮೇಲಿನ ಪರಿಣಾಮವನ್ನು ಗಮನಿಸಿಕೂಡ ಪ್ರಾರಂಭಿಸಿರಬೇಕೆಂದು ಅರ್ಥವಾಗುತ್ತದೆ. ವೇದಕಾಲದ ನಂತರದಲ್ಲಿ ದೊರೆತಿರುವ ಔಷಧೀಯ ಸಸ್ಯಗಳ ಅರಿವಿನ ಕುರಿತ ವ್ಯವಸ್ಥಿತ ದಾಖಲೀಕರಣವೇ ವ್ಯವಸ್ಥಿತ ಯೋಗ್ಯಶಾಖೆಯಾಗಿ ಮುಂದಿನ ದಿನಗಳಲ್ಲಿ ಆಯುರ್ವೇದ ಎಂದು ಕರೆಯಲ್ಪಟ್ಟಿತು.

ಆಯುರ್ವೇದದ ಸಸ್ಯಗಳ ಕುರಿತ ತಿಳುವಳಿಕೆ ವಿಶಿಷ್ಟವಾಗಿದೆ. ಉದಾಹರಣೆಗೆ ಪ್ರಾಚೀನವಾದ ಚರಕಸಂಹಿತಾ (ಕ್ರಿ.ಪೂ. 1500 – ಕ್ರಿ.ಶ. 400) ದಿಂದ ಪ್ರಾರಂಭಿಸಿ ಸಸ್ಯಗಳು ಮತ್ತು ಅವುಗಳ ಔಷಧೀಯ ಉಪಯೋಗಗಳ ಕುರಿತು ಅಗಾಧ ವಿವರಣೆಗಳು ಲಭ್ಯವಿದೆ. ಗಿಡಮೂಲಿಕೆಗಳ ಕುರಿತು ತಿಳಿಸುವ ಅನೇಕ ಉತ್ತಮ ಸಾಂಪ್ರದಾಯಿಕ ಆಯುರ್ವೇದದ ಪಠ್ಯಗಳು ಮತ್ತು ಹಸ್ತಪ್ರತಿಗಳು ಲಭ್ಯವಿದೆ. ಇವುಗಳು ಬಹಳವಾಗಿ ಸಂಹಿತೆಗಳು, ಸಂಗ್ರಹಗಳು, ನಿಘಂಟುಗಳು, ವ್ಯಾಖ್ಯೆಗಳು ಹಾಗೂ ನಿರ್ದಿಷ್ಟ ವಿಷಯಗಳ ಕುರಿತಾದ ಪಾಠಗಳು. ಉದಾ: ಔಷಧ ತಯಾರಿಕೆ (ಭಾಷ್ಯಜ ಕಲ್ಪನಾ), ಬಾಲ್ಯ ಚಿಕಿತ್ಸಾ ಮುಂತಾದವುಗಳು.

**ಔಷಧಲೋಕದಲ್ಲಿ ಪೂರ್ವ ಪಶ್ಚಿಮ ಮುಖಾಮುಖಿ**

ಆಯುರ್ವೇದವೆಂಬ ಪ್ರಾಚೀನ ಮರವು ಹೊಸ ಗಾಳಿಗೆ ತನ್ನನ್ನು ತೆರೆದುಕೊಂಡು ತೂಗಾಡಿದೆ. ಮನುಷ್ಯ ಜೀವಲೋಕಕ್ಕೆ ಮತ್ತು ಅದರ ಅಭಿವೃದ್ಧಿಗೆ ಆಯುರ್ವೇದ ಅಪಾರ ಕೊಡುಗೆಯನ್ನು ನೀಡಿದ್ದು ಅದಕ್ಕೆ ಪ್ರತಿಯಾಗಿ ಆಯುರ್ವೇದ ಪಡೆದುಕೊಂಡ ಉಡುಗೊರೆಗಳು – ಪಾದರಸದ ಮಾಹಿತಿ, ಮಾದಕತೆ ಮತ್ತು ಲೈಂಗಿಕತೆಯ ಕುರಿತ ಚಿಕಿತ್ಸೆಗಳಾಗಿವೆ. ಈ ಕಾರಣಕ್ಕೆ ಚರಕನು ಬಹಿರಂಗ ಹೇಳಿಕೆಯನ್ನೇ ಕೊಟ್ಟು ಬಿಟ್ಟಿದ್ದಾನೆ 'ಇಡೀ ವಿಶ್ವವೇ ಅರಿವಿಗೆ ಗುರುವಾಗಿದೆ'.

ಪೋರ್ಚುಗೀಸರ ಪ್ರಥಮ ಅಲೆಗಳು ಒಬ್ಬ ಪ್ರಮುಖ ವ್ಯಕ್ತಿಯನ್ನೇ ಭಾರತಕ್ಕೆ ಕರೆ ತಂದಿತು. ಗಾರ್ಸಿಯಾ ದಾ ಓರ್ತಾ ಎನ್ನುವ ನಿಪುಣ ಯಹೂದಿ ವೈದ್ಯ ಗೋವಾಕ್ಕೆ 16ನೇ ಶತಮಾನದಲ್ಲಿ ಆಗಮಿಸಿದರು. ಗಾರ್ಸಿಯಾ ದಾ ಓರ್ತಾ ಮತ್ತು ಅವನ ಸಹೋದ್ಯೋಗಿಗಳು ಇಲ್ಲಿಯ ಮೂಲ ವೈದ್ಯರು ಮತ್ತು ಸಹಾಯಕರೆಡೆಗೆ ಸೆಳೆಯಲ್ಪಟ್ಟರು. ಗಾರ್ಸಿಯಾ ದಾ ಓರ್ತಾ ಯಹೂದಿ ವೈದ್ಯನು 1563ರಲ್ಲಿ 'ಭಾರತದ ಸ್ವಾಭಾವಿಕತೆ ಮತ್ತು ಔಷಧಗಳ

*Garcia d'Orta*

Colóquios dos simples
e drogas e cousas
medicinais da India

*Reprodução fac similada*
*da edição impressa em Goa em*
*10 de Abril de 1563*

Comemorando o
QUARTO CENTENÁRIO DA EDIÇÃO ORIGINAL

*Obra dada à estampa pela*
*ACADEMIA DAS CIENCIAS DE LISBOA*

MCMLXIII

ಮೇಲಿನ ಮಾತುಕತೆ' (*Colloquios on the Simples and Drugs of India*) ಎನ್ನುವ ಸಂಭಾಷಣೆ ಶೈಲಿಯ ಶ್ರೇಷ್ಠಕೃತಿಯನ್ನು ಗೋವಾದಲ್ಲಿನ ದೀರ್ಘ ಅನುಭವದ ಮೇಲೆ ಬರೆದನು. ನಂತರ ಮಲಬಾರ್ ಪ್ರದೇಶದ ಔಷಧೀಯ ಸಸ್ಯಗಳ ಶಾಸ್ತ್ರೀಯ ಅಧ್ಯಯನವು ಕೊಚ್ಚಿಯ ಡಚ್ ಗವರ್ನರ್ ಆಗಿದ್ದ ಹೆಂಡ್ರಿಕ್ ಆಡ್ರಿಯನ್ ವಾನ್ ರೀಡ್‌ರವರ ಮಾರ್ಗದರ್ಶನದಲ್ಲಿ ಪ್ರಕಟಗೊಂಡಿತು.

ಹೋರ್ತುಸ್ ಮಲಬಾರಿಕುಸ್ ಎನ್ನುವ ಶ್ರೇಷ್ಠಕೃತಿಯು 17ನೇ ಶತಮಾನದಲ್ಲಿ ಪ್ರಕಟಗೊಂಡಿತು. ಮೂವತ್ತು ವರ್ಷಗಳ ಪರಿಶ್ರಮವು, ಗೋವಾದಿಂದ ಕನ್ಯಾಕುಮಾರಿವರೆಗಿನ ಪ್ರಾದೇಶಿಕ ಸಸ್ಯಜ್ಞಾನದ ಕಥೆಗಳ ಗುಚ್ಚವನ್ನು ಒಳಗೊಂಡಿದೆ. ಈ ಅಧ್ಯಯನಕ್ಕೆ ಅಗತ್ಯವಾದ ಸಸ್ಯ ಗುರುತಿಸುವಿಕೆ, ಇತಿಹಾಸ, ವಿವಿಧ ರೋಗಗಳಿಗೆ ಬಳಕೆಯ ಮಾಹಿತಿ ಹಾಗೂ ಜ್ಞಾನವು ಪ್ರಮುಖವಾಗಿ ಕೊಚ್ಚಿಮೂಲದ ಸಸ್ಯ ತಜ್ಞರು, ಮೂವರು ಗೌಡ ಸಾರಸ್ವತ ಬ್ರಾಹ್ಮಣರಾದ ರಂಗಭಟ್, ವಿನಾಯಕ ಪಂಡಿತ್, ಅಪ್ಪು ಭಟ್ ಮತ್ತು ಮಲಬಾರ್ ತೀರದ ಈಷವ ಮಲಯಾಳಿ ವೈದ್ಯರಾದ ಇಟ್ಟಿ ಅಚ್ಚುದನ್‌ರಿಂದ ಪೂರೈಸಲ್ಪಟ್ಟಿತು ಎನ್ನುವುದು ಪ್ರಶಂಸನೀಯವಾದ ಸಂಗತಿ.

**ಹೋರ್ತುಸ್ ಮಲಬಾರಿಕುಸ್**

ಹೋರ್ತುಸ್ ಮಲಬಾರಿಕುಸ್ ಭಾರತೀಯ ಔಷಧೀಯ ಸಸ್ಯಗಳ ಬಗೆಗಿನ ಅತಿ ಹಳೆಯದಾದ ಪ್ರಮುಖ ಪ್ರಕಟಿತ ಪುಸ್ತಕ ಕೃತಿ. ಇದರ 12 ಭಾಗಗಳಲ್ಲಿ ಮೊದಲ ಭಾಗವು 1678 ಆಮ್‌ಸ್ಟರ್‌ಡ್ಯಾಮ್‌ನಲ್ಲಿ ಪ್ರಕಟನೆಗೊಂಡಿದ್ದು ಹೆಚ್.ಎ.ವಾನ್ ರೀಡ್‌ರವರಿಂದ ನಿರ್ಮಿಸಲ್ಪಟ್ಟಿತು. ಬಹುಶಃ ಇದು ಪ್ರಾಚೀನ ಮಲಬಾರ್‌ನ ಪ್ರಾದೇಶಿಕ ಜ್ಞಾನದ ಕುರಿತು ಲಭ್ಯವಿರುವ ಏಕಮಾತ್ರ ದಾಖಲೆಯಾಗಿದೆ. 17ನೇ ಶತಮಾನದ ಆಯುರ್ವೇದ ಶಾಸ್ತ್ರಜ್ಞರಿಂದ ಯಶಸ್ವಿಯಾಗಿ ಬಳಸಲ್ಪಟ್ಟಿರುವ ಸುಮಾರು ನೂರಾರು ಔಷಧೀಯ ಸಸ್ಯಗಳು ಇದರಲ್ಲಿ ವಿವರಿಸಲ್ಪಟ್ಟಿದ್ದು ಅವುಗಳ ಬಳಸುವ ವಿಧಾನಗಳನ್ನೂ ಇದು ವಿವರಿಸುತ್ತದೆ. ಹೀಗೆ ವಿವರಿಸಿದ ಇಂತಹ ಅನೇಕ ಗಿಡಗಳ ಪರಿಚಯವು ಇನ್ನೂ ಗುರುತವಾಗಿ ಸ್ಥಾಪಿಸಲ್ಪಡದೇ ಇರುವುದರಿಂದ ಇದು ಪ್ರಸ್ತುತ ಆಯುರ್ವೇದ ವೈದ್ಯಶಾಸ್ತ್ರದಲ್ಲಿ ಪರಿಗಣಿಸಬಹುದಾದ ಆಸಕ್ತಿಕರ ವಿಷಯವಾಗಿದೆ.

ಹೋರ್ತುಸ್ ಮಲಬಾರಿಕುಸ್ ಭಾರತದ ಸಸ್ಯಗಳ ಕುರಿತು ಯುರೋಪಿನ ಭಾಷೆಗಳಲ್ಲಿ ಕೂಡ ವಿವರಿಸುವ ಅತೀ ಪ್ರಾಚೀನ ಕೃತಿ. ಇದು ಸುಮಾರು ವರ್ಷಗಳ ಪರಿಶ್ರಮದಿಂದ ಪ್ರಕಟಗೊಂಡ ಕೃತಿಯಾಗಿದ್ದು ರೀಡ್‌ರವರು, ಅನೇಕ ಸಸ್ಯ ಸಂಗ್ರಾಹಕರು, ವಿವರಣೆಗಾರರು, ವ್ಯಖ್ಯಾನಗಾರರು, ವೈದ್ಯರು, ಕಲಾಕಾರರು, ವಿಜ್ಞಾನಿಗಳು ಮುಂತಾದ ಮಲಬಾರ್ ಮತ್ತು ಯುರೋಪಿನ ಪ್ರಮುಖರ ಕೊಡುಗೆಯಿಂದ ಈ ಕೃತಿ ಪ್ರಕಟಗೊಂಡದ್ದಾಗಿದೆ. ಇವರಲ್ಲಿ

ವಿಶೇಷ ಪರಿಚಯುವನ್ನು ಪ್ರಮುಖವಾಗಿ ಬ್ರದರ್ ಮ್ಯಾಥ್ಯೂ, ಜಾನ್ ಕಸೇರಿಯನ್, ಇಟ್ಟಿ ಅಚ್ಯುದನ್, ರಂಗಭಟ್, ವಿನಾಯಕಪಂಡಿತ್, ಅಪ್ಪುಭಟ್‌ರ ಹೆಸರನ್ನು ಉಲ್ಲೇಖಿಸಲಾಗಿದೆ. ವಿಶೇಷವಾಗಿ ಸುಮಾರು 78 ಮಲಬಾರ್‌ನ ವಿಶೇಷ ತಳಿಗಳ ಸಸ್ಯಗಳ ಪರಿಚಯವನ್ನು ಇದರಲ್ಲಿ ನೀಡಲಾಗಿದ್ದು, 794 ಅಸಾಮಾನ್ಯ ಸುಂದರ ವಿವರಣೆಗಳಾಗಿವೆ. ಪ್ರತಿ ಸಸ್ಯದ ಕುರಿತು ಲ್ಯಾಟಿನ್ ಭಾಷೆಯ ವಿವರಣೆಯ ಜೊತೆಗೆ ಉಳಿದ ನಾಲ್ಕು ಲಿಪಿಗಳಲ್ಲಿ ಕೂಡ (ಮಲಯಾಳಂ, ಕೊಂಕಣಿ (ನಾಗರಿ), ರೋಮನ್ ಮತ್ತು ಅರೇಬಿಕ್) ಸಸ್ಯದ ಹೆಸರನ್ನು ನೀಡಲಾಗಿದೆ.

ಆಧುನಿಕ ಸಸ್ಯಶಾಸ್ತ್ರ ಪಿತಾಮಹ ಕಾರ್ಲ್ ಲ್ಯೂಯಿನಸ್ ಸಸ್ಯಶಾಸ್ತ್ರವನ್ನು ಪ್ರಚುರಪಡಿಸುವ ಸಮಯದಲ್ಲಿ ಸಮಾರು 75 ವರುಷಗಳ ನಿರಂತರತೆಯಲ್ಲಿ ಸಸ್ಯಶಾಸ್ತ್ರಕ್ಕೆ ಹೋರ್ತುಸ್ ಮಲಬಾರಿಕುಸ್‌ಗೆ ಪರಿಚಯಗೊಂಡಿತು.

**ಕೊಂಕಣಿಗರು ಮತ್ತು ಆರ್ಯುವೇದ ಹಾಗೂ ಹೋರ್ತುಸ್ ಮಲಬಾರಿಕುಸ್‌ಗೆ ಅವರ ಕೊಡುಗೆ**

ಕೊಂಕಣಿ ಬ್ರಾಹ್ಮಣರ ಮತ್ತು ಕೊಂಕಣಿ ಪ್ರಾಚೀನತೆಯನ್ನು ತಿಳಿದುಕೊಳ್ಳಬೇಕಾದರೆ ನಾವು ಸ್ಕಂದ ಪುರಾಣ ಮತ್ತು ಅದರ ಸಹ್ಯಾದ್ರಿ ಕಾಂಡವನ್ನು ಓದಬೇಕು. ಸಹ್ಯಾದ್ರಿ ಕಾಂಡವು ನಮಗೆ ಕೊಂಕಣ ಪ್ರದೇಶದ ಪವಿತ್ರ ಸ್ಥಳಗಳು ಪೂಣೆಯಿಂದ ದಕ್ಷಿಣ ಕನ್ನಡದವರೆಗೆ ವಿಸ್ತರಿಸಿರುವುದರ ಕುರಿತು ತಿಳಿಸುವುದರಿಂದ ನಮಗೆ ಬಹಳ ಪ್ರಮುಖವಾದುದು.

ವಾಸ್ತವವಾಗಿ ಆಯುರ್ವೇದ ಕ್ಷೇತ್ರಕ್ಕೆ ಕೊಂಕಣಿಗರ ಕೊಡುಗೆಯ ಬಗ್ಗೆ ನಮ್ಮಲ್ಲಿ ಅತಿ ಕಡಿಮೆ ಮಾಹಿತಿಯಿದೆ. ಆಯುರ್ವೇದವು ತಲೆಮಾರುಗಳಿಂದ ಕೇರಳದಲ್ಲಿ ಯಶಸ್ವಿಯಾಗಿ ಅನುಸರಿಸುತ್ತಿರುವ ವೈದ್ಯಕೀಯ ಶಾಖೆಯೆಂಬುದು ಎಲ್ಲರಿಗೂ ತಿಳಿದಿರುವ ವಿಷಯವಾಗಿದೆ, ಇಂದೂ ಕೂಡ ಇಡೀ ಭಾರತದಲ್ಲಿ ಕೇರಳ ಮಾತ್ರವೇ ಆಯುರ್ವೇದವನ್ನು ಯಶಸ್ವಿಯಾಗಿ ಅಳವಡಿಸಿಕೊಂಡಿರುವ ಪ್ರದೇಶವಾಗಿದೆ. ಕೇರಳದ ಗೌಡ ಸಾರಸ್ವತ ಬ್ರಾಹ್ಮಣರು ಆಯುರ್ವೇದದ ಅಭಿವೃದ್ಧಿಗೆ ಹೆಜ್ಜಾಗಿ ದುಡಿದಿದ್ದಾರೆ. ಹೋರ್ತುಸ್ ಮಲಬಾರಿಕುಸ್‌ನಲ್ಲಿರುವ ಉಲ್ಲೇಖವು ಮೂವರು ಕೊಂಕಣಿ ಬ್ರಾಹ್ಮಣ ವೈದ್ಯರುಗಳಾದ ರಂಗಭಟ್, ವಿನಾಯಕಪಂಡಿತ್ ಮತ್ತು ಕೊಚ್ಚಿಯ ಅಪ್ಪುಭಟ್‌ರವರ ಕೊಡುಗೆ ಪ್ರಾಚೀನತೆಯ ಬಗೆಗೆ ತಿಳಿಸುತ್ತದೆ. ಇದಲ್ಲದೇ ಕೃತಿಯಲ್ಲಿ ಬೇರೆ ಬೇರೆ ಸಸ್ಯಗಳ ಕೊಂಕಣಿ ಹೆಸರುಗಳನ್ನು ದೇವನಾಗರಿ ಲಿಪಿಯಲ್ಲಿ ಒದಗಿಸಿರುವುದು ವಿಶೇಷ.

ಕೊಂಕಣಿಗಳ ಕೊಡುಗೆಯ ಕುರಿತು ಇನ್ನೂ ಹೆಚ್ಚಿನ ಬೆಳಕು ತೋರುವ ಸಲುವಾಗಿ ಮುಖ್ಯವಾಗಿ ಆಯುರ್ವೇದ ಕ್ಷೇತ್ರಕ್ಕೆ ಗೌಡ ಸಾರಸ್ವತ ಬ್ರಾಹ್ಮಣರ ಕೊಡುಗೆ ಕೆ.ವಿಶ್ವನಾಥ ಕಾಮತರ 'ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿ' ಎನ್ನುವ ಲೇಖನದಲ್ಲಿ ಪಡೆಯಬಹುದಾಗಿದೆ.

(ಆಕರ : ಸದ್ಗುರು ಪೂಜಾ). ನಾನು ಅವರ ಲೇಖನವನ್ನು ಉಲ್ಲೇಖಿಸುವುದಾದರೆ 'ಅಧ್ಯಯನದ ಸಮಯದಲ್ಲಿ ಕೇರಳದ ಚೆರಾಯ್‌ನಿಂದ 82 ವರ್ಷದ ಹಿರಿಯ ವಿದ್ವಾಂಸರಾದ ಕೃಷ್ಣಭಟ್‌ರನ್ನು ಭೇಟಿಮಾಡುವ ಅವಕಾಶ ದೊರಕಿತ್ತು. ಈ ಕೆಲವು ಮಾಹಿತಿಗಳನ್ನು ನಾವು ಅವರಿಂದ ಕಲೆಹಾಕಿದೆವು: ಪಿಲು ಕಾಮತರ ನಾಲ್ವರು ಪುತ್ರರಲ್ಲಿ ಒಬ್ಬರಾದ ಕುರುಪ್ಪಳ್ಳಿಯಲ್ಲಿ ನೆಲೆಸಿದ ಬಾಬ ಕಾಮತರು, ಬಾಬ ಕಾಮತರ ಪುತ್ರ ವೆಂಕಟೇಶ ಕಾಮತ್, ಪಿಲು ಕಾಮತರ ಮತ್ತೊಬ್ಬ ಪುತ್ರ ಅಚ್ಯುತ ಕಾಮತ್ ಕೊಚ್ಚಿಯಲ್ಲಿ ನೆಲೆನಿಂತರು ಮತ್ತು ಕೊಚ್ಚಿ ಕಾಮತಕುಟುಂಬದ ಅಪ್ಪುಚ್ಚ ಕಾಮತರು 18ನೇ ಶತಮಾನದಲ್ಲಿ ಕೇರಳದ ಮಹಾನ್ ಆಯುರ್ವೇದ ವೈದ್ಯರಾಗಿ ಪ್ರಸಿದ್ಧರು. ಆಯುರ್ವೇದ ಪದ್ಧತಿಯು ಇವರ ಕುಟುಂಬ ವೃತ್ತಿಯಾಗಿದ್ದು 1837ರಲ್ಲಿ, ಈ ಕುಟುಂಬದಲ್ಲಿ ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿ ಜನಿಸಿದರು. ಗಿರಿ ಕಾಮತರು ಮತ್ತು ಗೌರಿಬಾಯಿಯವರಿಗೆ ಜನಿಸಿದ ಎರಡನೇಯ ಪುತ್ರ ನರಸಿಂಹ ಕಾಮತರು ಮುಂದೆ ಶ್ರೀಮದ್ ಭುವನೇಂದ್ರ ತೀರ್ಥರಾಗಿ ತಮ್ಮ 14ನೇಯ ವಯಸ್ಸಿನಲ್ಲಿ ಅಂದರೆ 1851ರಲ್ಲಿ ಸುಮತೀಂದ್ರ ತೀರ್ಥ ಸ್ವಾಮೀಜಿಯವರಿಂದ ದೀಕ್ಷೆ ಪಡೆದರು. ನರಸಿಂಹ ಕಾಮತರಿಗೆ ವಾಮನ ಕಾಮತ್ ಎನ್ನುವ ಹಿರಿಯ ಸಹೋದರ ಮತ್ತು ಕೃಷ್ಣ ಕಾಮತ್ ಎನ್ನುವ ಕಿರಿಯ ಸಹೋದರರು ಇದ್ದರು.'

ಆ ಕಾಲಘಟ್ಟದಲ್ಲಿ ಕೇರಳ ಪ್ರದೇಶದಲ್ಲಿ ಆಯುರ್ವೇದ ಮಾತ್ರವೇ ಅನುಸರಿಸಿಕೊಳ್ಳುತ್ತಿದ್ದ ವೈದ್ಯಕೀಯ ವ್ಯವಸ್ಥೆಯಿತ್ತು. ಇದನ್ನು ವೃತ್ತಿಯಾಗಿ ಬೋಧಿಸುವ ಯಾವುದೇ ಶಾಲಾ ಕಾಲೇಜು ವ್ಯವಸ್ಥೆಗಳು ಇರಲಿಲ್ಲ. ಸಮರ್ಥ ವೈದ್ಯರುಗಳು ತಮ್ಮ ಪೂರ್ವಜರಿಂದ ಇದನ್ನು ಮುನ್ನಡೆಸಿಕೊಂಡು ಹೋಗುತ್ತಿದ್ದರು, ಹೀಗೆ ಕಳೆದ 200ಕ್ಕಿಂತಲೂ ಹೆಚ್ಚಿನ ವರ್ಷಗಳಿಂದ ಕಾಮತರ ಪಳ್ಳಿಪ್ಪುರಂ ಕುಟುಂಬವು (ಮೊದಲು ಕುರುಪ್ಪಳ್ಳಿ) ಆಯುರ್ವೇದವನ್ನು ಪಾಲಿಸಿಕೊಂಡು, ಅಭ್ಯಸಿಸಿ ಕೊಂಡಿದ್ದರು. ನಾನು ಕೂಡ ಪ್ರಸಿದ್ಧ ಕೇರಳದ ಕಾಮತರ ಕುಟುಂಬಕ್ಕೆ ಸೇರಿದವನೆಂದು ತಿಳಿಸಲು ಹೆಮ್ಮೆ ಮತ್ತು ಧನ್ಯತಾ ಭಾವನೆಯಿದೆ.

ಪೂಜ್ಯ ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿಯವರು ತಮ್ಮ ಸೇವಾಸ್ಥಾನದಿಂದ ಧಾರ್ಮಿಕ, ಶೈಕ್ಷಣಿಕ, ಸಂಸ್ಕೃತ, ಆಯುರ್ವೇದ ಮತ್ತು ಶಿಲ್ಪಕಲೆಗಳ ಕ್ಷೇತ್ರಗಳಿಗೆ ತಮ್ಮ ಸೇವೆ ಸಲ್ಲಿಸಿದ್ದರು. ಅವರ ಆಶೀರ್ವಾದದಿಂದ ಹಲವಾರು ಕುಟುಂಬಗಳು ಆಯುರ್ವೇದ ಕ್ಷೇತ್ರವನ್ನು ಪಾಲಿಸಿಕೊಂಡು ಬದುಕಿದ್ದಾರೆ. ಉದಾ: ಪಾಂಗಾಳ ನಾಯಕರ ಕುಟುಂಬ, ಡಾ। ಜೆ. ಎ. ಭಟ್ ಕುಟುಂಬಗಳು ಇಲ್ಲಿ ಉಲ್ಲೇಖನೀಯ. ಡಾ। ಜೆ. ಎ. ಭಟ್, ಎಂ. ಅನಂತ ಕಾಮತ್ ಮುಂತಾ ದ ಲೇಖಕರು ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿಯವರ ಆಯುರ್ವೇದ ಅಭ್ಯಾಸದ ಮತ್ತು ಕೌಶಲ್ಯಗಳ ಕುರಿತು ಉಲ್ಲೇಖವು ನೀಡಿದ್ದು ಪುನರಾವರ್ತಿಯಾಗುವುದೆಂಬ ಉದ್ದೇಶದಿಂದ ಇಲ್ಲಿ ಪ್ರಸ್ತಾಪಿಸಲಿಲ್ಲ.

ಶ್ರೀ ಸಂಸ್ಥಾನ ಕಾಶೀಮಠಕ್ಕೂ ಆಯುರ್ವೇದದ ವಿಷಯದಲ್ಲಿ ಬಹಳ ಸಂಬಂಧವಿದೆ. ಶ್ರೀಮದ್ ಭುವನೇಂದ್ರ ತೀರ್ಥರು ಮಾತ್ರವಲ್ಲದೇ ಅನೇಕ ಪೂ ಯತಿಗಳು ಆಯುರ್ವೇದದ ಮಹಾನ್ ವೈದ್ಯರುಗಳಾಗಿದ್ದರು. ಡಾ। ಎಮ್. ಪ್ರಕಾರ 1963ರಲ್ಲಿ ಸಾರಸ್ವತ ಬ್ರಾಹ್ಮಣ ಸೇವಾ ಸಂಘ ಮಂಗಳೂರು ಸಂಭ್ರಮೋತ್ಸವದಲ್ಲಿ ಪ್ರಕಟಿಸಿದಂತೆ (ಪುಟ 107) ಕಾಶೀಮಠದ 11ನೇ ಯತಿಗಳ ಶ್ರೀಮದ್ ರಾಜೇಂದ್ರ ತೀರ್ಥರು. ಪೂಜನೀಯರು ಗಮನಾರ್ಹ ಕೃತಿಯಾದ 'ಶರೀರ ಬರೆದಿದ್ದರು. ಪೂಜನೀಯರು ಸಂಸ್ಕೃತದ ಪ್ರಸಿದ್ಧ ಬರಹಗಾರರು ಮತ್ತು ಮ ಮೂಲಕ ಹೊಟ್ಟೆ ನೋವಿಗೆ ಸಂಬಂಧಪಟ್ಟ ಖಾಯಿಲೆಗಳನ್ನು ಗುಣಪಡಿಸು ವೈದ್ಯರಾಗಿದ್ದರು.

ಆಯುರ್ವೇದವು ಅಪಾರವಾದ ಮತ್ತು ಅಮೂಲ್ಯವಾದ ಗಿಡಗಳ ಜೀವ ವಿವಿಧ ನೆಲೆಗಳಲ್ಲಿ ಅರ್ಥೈಸಿಕೊಳ್ಳುತ್ತದೆ. ಈ ಗಿಡಗಳು ನಿಘಂಟುಗಳಿಂದ, ವಿವಿಧ ವ್ಯಾ ಪರಾಮರ್ಶಿಸಿ ಸೇರಿಸಿಕೊಳ್ಳಲಾಗುತ್ತದೆ. ಈ ಪ್ರಕ್ರಿಯೆಯು ಬಹಳ ಕ್ಲಿಷ್ಟ ಮತ್ತು ಕಠಿ ಕಾರಣದಿಂದ 7500 ಪ್ರಭೇದಗಳಲ್ಲಿ 1/5 ಭಾಗದಷ್ಟು ಸಸ್ಯಗಳು ಮಾತ್ರ ಸಮುದಾಯ ಪೂರ್ತಿಯಾಗಿ ಅಧ್ಯಯಿಸಲ್ಪಟ್ಟು ಆರ್ಯುವೇದ ಮಾನದಂಡಗಳನ್ನು ಉತ್ತಿ ಆಯುರ್ವೇದ ಶಾಸ್ತ್ರಗಳೊಂದಿಗೆ ಗುರುತಿಸಲ್ಪಟ್ಟಿವೆ ಮತ್ತು ಬಹುವಾಗಿ ಪರಿಚಯಿ

ಹೆಚ್. ಎ. ವಾನ್ ರೀಡ್‌ರವರು 1678–1693ರ ಅವಧಿಯಲ್ಲಿ 12 ಭಾಗಗಳಲ್ಲಿ ಪ್ರಕಟಿಸಿದ ಹೋರ್ತುಸ್ ಮಲಬಾರಿಕುಸ್ ಗ್ರಂಥವು ಆಯುರ್ವೇದಕ್ಕೆ ಕೊಂಕಣಿಗರ ಕೊಡುಗೆಯಕುರಿತಾದ ಮೊತ್ತ ಮೊದಲನೆಯ ದಾಖಲೆಯಾಗಿ ಬೆಳಕನ್ನು ಚೆಲ್ಲುತ್ತದೆ. ಗೌಡ ಸಾರಸ್ವತ ಬ್ರಾಹ್ಮಣರ ಆಯುರ್ವೇದದ ಕೊಡುಗೆ ಮತ್ತು ಆಯುರ್ವೇದ ದೊಂದಿಗಿರುವ ಸಂಬಂಧವನ್ನು ಸಂಶೋಧಿಸಲು, ಸಂಶೋಧನಾ ಕೇಂದ್ರದ ಸ್ಥಾಪನೆಯ ಅವಶ್ಯಕತೆ ಇಂದು ಪ್ರಮುಖವಾಗಿದೆ.



(ಅ

ವೆಂಕಟೇಶ

# ಹೋರ್ತುಸ್ ಮಲಬಾರಿಕುಸಿನಲ್ಲಿನ ಕೊಂಕಣಿ ಪ್ರಮಾಣಪತ್ರ

– ದಿ॥ ಬಸ್ತಿ ಪುಂಡಲೀಕ ಶೆಣೈ

ಹಿಂದೆ ಮರಾಠಿಗರು ಪಾದ್ರಿ ಥಾಮಸ್[1] ಸ್ಟೀಫನ್ಸ್‌ರವರು ರಚಿಸಿದ ಕೊಂಕಣಿ ವ್ಯಾಕರಣವನ್ನು ಮರಾಠಿಯ ವ್ಯಾಕರಣವೆಂದು ವಾದಹೂಡಿದ್ದರು. ಕಡೆಗೆ ಅವರು ಅದು ಗೋವದ ಮರಾಠಿಯ ವ್ಯಾಕರಣವೆಂದರು. ಅವರು ಅದನ್ನು ಮೂಲಮಹಾರಾಷ್ಟ್ರಿಯದೆಂದು ಅಂದುದಾದರೆ ಅದನ್ನು ಒಪ್ಪಬಹುದಾಗಿತ್ತು. ಆದರೆ ಅವರು ಹಾಗೆ ಹೇಳದೇ ಅದನ್ನು ಗೋವದ ಮರಾಠಿಯದನ್ನುವುದನ್ನು ಮಾತ್ರ ಒಪ್ಪಲಾಗುವುದಿಲ್ಲ. ಹಾಗೆಯೇ ಕೊಚ್ಚಿಯ ಪ್ರಖ್ಯಾತ ವೈದ್ಯರಾಗಿದ್ದ ಮೂವರು ಸಾರಸ್ವತ ಬ್ರಾಹ್ಮಣರು 1675ನೆಯ ಇಸವಿಯಲ್ಲಿ ಡಚ್ ನೌಕಾಧಿಕಾರಿ ಹೆಂಡ್ರಿಕಸ್[2] ವಾನ್‌ರ್ಹೀಡ್ ಎಂಬವರಿಗೆ ಮಲಬಾರ ಕಡೆಯಲ್ಲಿನ ಸಕಲ ವನೌಷಧಿಗಳ ಗುಣ, ಚಿತ್ರ, ಉಪಯೋಗ ಮುಂತಾದವುಗಳ ಸಂಪೂರ್ಣ ವಿವರಗಳನ್ನೊಳಗೊಂಡ ಒಂದು ಗ್ರಂಥವನ್ನು ಸಿದ್ಧಪಡಿಸಿಕೊಟ್ಟಿದ್ದರು. ಮತ್ತು ಆ ಗ್ರಂಥದೊಳಗಿನ ವಿಷಯಗಳು ಯಥಾರ್ಥವಾದವುಗಳೆಂದು ಪ್ರಮಾಣ ಪತ್ರವನ್ನು ಬರೆದು ಕೊಟ್ಟಿದ್ದರು. ಇದನ್ನು ತಿಳಿದುಕೊಂಡ ಮರಾಠಿ ಪಂಡಿತರು ಆ ಪ್ರಮಾಣಪತ್ರವನ್ನು "ಮೊತ್ತಮೊದಲು ಮುದ್ರಿಸಲ್ಪಟ್ಟ ಮರಾಠಿ ಲೇಖನ" ಎಂಬುದಾಗಿ ಸಮಾಚಾರ ಪತ್ರಿಕೆಗಳಲ್ಲಿ ಪ್ರಚಾರ ಮಾಡಿದ್ದರು. ಆದರೆ ಆ ಪತ್ರವು ಮರಾಠಿಯದಾಗಿರದೇ ಅಚ್ಚ ಕೊಂಕಣಿಯಲ್ಲಿ ನಾಗರಿಲಿಪಿಯಲ್ಲಿ ಬರೆಯಲಾಗಿತ್ತು. ಆ ಪತ್ರದ ಪ್ರತಿಯು ಮುಂದಿನಂತಿದೆ:–

**"ಸ್ವಸ್ತಿ ಶ್ರೀ ಶಾಲಿವಾಹನಶಕ ೧೫೯೩ ರಾಕ್ಷಸ ಸಂವತ್ಸರ ಚೈತ್ರ ಬಹುಳ ೧೦ ಕೊಚೀ ರಾಜಪಾಟಣೀಂ ಬೈಸಿಕೆರಂಗಭಟ್ಟ ತಥಾ ವಿನಾಯುಕ ಪಂಡಿತ ಆಪೂಭಟ್ಟ ತೇಗ ವೈದ್ಯ ತಾನೀಂ ಕೊಚಿಚ್ಯಾ ಕುಮುದೋರ್ ಆಂದ್ರಿಕೀ ಫಾಂಡ್ರೇ ತ್ಯಾಚ್ಯಾ ನಿರೋಪಾನ ಹ್ಯಾ ಮಲಬಾರ ದೇಶಾತು ಆಶಿಲೆ ಓಷಧ ಮಾತ್ರ ವೃಕ್ಷ, ವಾಲಿ, ಝಾಡಖಂಡ, ಒಳಖತೇಲ್ಯಾ ಮನುಷ್ಯಾಂಕ ಮುಸಾರೊ ದೇವುನು ತೇ ತೇ ಗಾಂವಾಂತು ಪೆಟ್ಟವೂನು ತಿಂ ತಿಂ ವೊಖದಂ ಆಣವೂನು ತ್ಯಾ ತ್ಯಾ ಝಾಡಾಚೆಂ ಫಲಂ, ಫೂಲ, ಪಾನ, ವೀಜ ಸಮುಸ್ತ ತ್ಯಾ ತ್ಯಾ ರುತು ಕಾಳಾವರಿ ಸಂಪಾದೂನು ತಿಂ ತಿಂ**

---

1 ಮಿಂತ್ರ 2. ಕೊಂಕಣಿಭಾಷೇಚೆಂ ಜೈತ. Horticus Indicus Malabaricus adornatus per Henricum van Rhede van Araakenostein.

ಚಿತ್ರಾರಿಲಿಂ ತ್ಯಾ ಉಪರಾಂತ ಆಮಿ ಆಮಗೆಲ್ಯಾ ವೈದ್ಯಗ್ರಂಥಾಚ್ಯಾ ನಿಘಂಟಾ ಪ್ರಮಾಣೆ ತ್ಯಾ ತ್ಯಾ ಓಷಧಾಚೆ ಗುಣ ವಾ ಅನುಭವಾನ ಜೋ ಜೋ ಗುಣ ಆಮಕಾ ಕಳಿಲೊ ತೊ, ವಾ ತ್ಯಾ ತ್ಯಾ ಒಖದಾಂಚಿಂ ನಾವಂ ಪಳೆಉನು ಆಜಿ ದೋನಿ ವರ್ಷಂ ಸಕಾಳಿ, ಸಾಂಜೆ ಆಮಿಂ ಲಾಗಿ ರಾವೂನು ಹೋ ಲೀವ್ರು ಸಂಪಾದೂನು ದಿಲಾ. ತೆಂ ಲಟಿಕ ಅಶಿ ಮ್ಹುಣುಂಚಾಕ ನಜ ಮ್ಹುಣು ಆಮಿಂ ಆಮಚಿ ನಿಸಾಣಿ ಕರ್ಣು ದಿಲೀ. ತೆಂ ಸತ್ಯ ಮ್ಹುಣು ಮಾನುಚೆಂ ಜಾಇದ ಮ್ಹುಣು ನಾಗರ ಬರಪಾನ ಹೆಂ ಬರವೂನು ದಿಲಾಂ ಶ್ರೀ"

ರಂಗ ಭಟು ವಿನಾಯಕ ಪಂಡಿತ ಆಪೂಚೆಂ ಓಪ

ಅರ್ಥ:—ಸ್ವಸ್ತಿ ಶ್ರೀ ಶಾಲಿವಾಹನ ಶಕ ೧೫೯೭ನೇಯ ರಾಕ್ಷಸ ಸಂವತ್ಸರದ ಚೈತ್ರ ಬಹುಳ ದಶಮಿಯಂದು ಕೊಚ್ಚಿ ರಾಜಧಾನಿಯಲ್ಲಿನ ವೈಸಿಕೆ ರಂಗ ಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪುಭಟ್ಟರೆಂಬ ಮೂವರು ವೈದ್ಯರು ಅವರು ಕೊಚ್ಚಿಯ ಕುಮಂದೋರ್ ಆಂದ್ರಿಕೀ ಫಾಂದ್ರೋ ಅವರ ನಿರೋಪದಿಂದ ಈ ಮಲಬಾರು ದೇಶದಲ್ಲಿ ಇದ್ದ ಓಷಧಿ ಮಾತ್ರಗಳನ್ನು ಅಂದರೆ, ಮರ, ಬಳ್ಳಿ, ಗಿಡ-ಕಂಟಿಗಳನ್ನು ಗುರುತಿಸಬಲ್ಲ ಜನರಿಗೆ ವೇತನ ಕೊಟ್ಟು ಆಯಾ ಊರುಗಳಿಗೆ ಕಳುಹಿಸಿ ಆಯಾ ಗಿಡಮೂಲಿಕೆಗಳನ್ನು ತರಿಸಿ ಆಯಾ ಗಿಡದ ಕಾಯಿ, ಹೂ, ಎಲೆ, ಬೀಜ ಸಮಸ್ತವನ್ನು ಆಯಾ ಋತುಕಾಲದಲ್ಲಿ ಸಂಪಾದಿಸಿ ಅವುಗಳನ್ನು ಚಿತ್ರಿಸಿದೆವು. ಆ ತರುವಾಯ ನಾವು ನಮ್ಮ ವೈದ್ಯಗ್ರಂಥದ ನಿರ್ಣಯದಂತೆ ಆಯಾ ಓಷಧಿಯ ಗುಣಗಳನ್ನೂ, ಅನುಭವದಿಂದ ನಮಗೆ ತಿಳಿದು ಬಂದ ಯಾವ ಗುಣವಿದೆಯೋ ಅದನ್ನೂ ಆಯಾ ಮದ್ದಿನ ಹೆಸರುಗಳನ್ನೂ ನೋಡಿ ಇಂದಿಗೆ ಎರಡು ವರ್ಷ ಬೆಳಗು ಬೈಗು ನಾವು ಹತ್ತಿರವಿದ್ದು ಈ ಗ್ರಂಥವನ್ನು ಸಂಪಾದಿಸಿಕೊಟ್ಟಿದ್ದೇವೆ. ಅದನ್ನು ಸುಳ್ಳೆನ್ನಬಾರದೆಂದು ನಮ್ಮ ಹಸ್ತಾಕ್ಷರ ಮಾಡಿಕೊಟ್ಟೆವು. ಅದನ್ನು ಸತ್ಯವೆಂದು ನಂಬತಕ್ಕದ್ದೆಂದು ನಾಗರೀ ಬರಹದಿಂದ ಇದನ್ನು ಬರೆದುಕೊಟ್ಟಿದ್ದೇವೆ. ಓಪ ಅಂದರೆ ಒಪ್ಪ = ರುಜು.

ಈ ಪತ್ರದ ಮೇಲಿಂದ ಕೊಚ್ಚಿಯಲ್ಲಿ "ದೀ = ಕೊಡು" ಕ್ರಿಯೆಯು "ದೇ" ಎಂಬ ರೂಪದಲ್ಲಿ ಮತ್ತು ದಕ್ಷಿಣ ಕನ್ನಡದ ಸಾರಸ್ವತರು ತಪ್ಪುರೂಪದಲ್ಲಿ ಬಳಸುವ "ರಾಬ್" = ಇರು, ನಿಲ್ಲು ಎಂಬುದು "ರಾವ್" ರೂಪದಲ್ಲಿ ಬಳಸಲ್ಪಡುತಿದ್ದಿತೆಂದು ತಿಳಿದುಬರುತ್ತದಲ್ಲದೇ ತಾ ಅಥವಾ ತರು ಎಂಬ ಅರ್ಥದಲ್ಲಿ "ಆಣ್" ಕ್ರಿಯೆಯು ಬಳಕೆಯಲ್ಲಿತ್ತೆಂದು ತಿಳಿದುಬರುತ್ತದೆ.

(1968ರಲ್ಲಿ ಪ್ರಕಟಿಸಿದ "ಕೊಂಕಣಿ ಮತ್ತು ಮರಾಠಿ ಇವುಗಳ ತುಲನಾತ್ಮಕ ವಿಮರ್ಶೆ ಹಾಗೂ ಗೌಡ ಸಾರಸ್ವತ ಬ್ರಾಹ್ಮಣರ ಇತಿಹಾಸ" ಎಂಬ ಪುಸ್ತಕದಿಂದ ಆಯ್ದದ್ದು)

# ವೈದ್ಯಲೋಕದ ಇತಿಹಾಸದಲ್ಲಿ ಗುಪ್ತಗಾಮಿನಿಯಾಗಿ ಪ್ರವಹಿಸಿದ ಸರಸ್ವತಿ ಪುತ್ರರು

– ಡಾ॥ ಜಯವಂತ ನಾಯಕ್

ಗೌಡ ಸಾರಸ್ವತ ಅಥವಾ ಕೊಂಕಣಿ ಬ್ರಾಹ್ಮಣರ ಇತಿಹಾಸವನ್ನು ಅಧ್ಯಯನ ಮಾಡಿದರೆ ಸುಮಾರು 5,000 ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ಯುತ್ತದೆ. ಗೌಡ ಸಾರಸ್ವತರು ಮೂಲತಃ ಸರಸ್ವತಿ ನದಿ ತಟದಲ್ಲಿ ವಾಸಿಸಿದವರು. ಸರಸ್ವತಿ ನದಿಯು ಉತ್ತರ ದೇಶದಲ್ಲಿ ಹರಿಯುತ್ತದೆ. ಅದಕ್ಕೆ ಗೌಡ ದೇಶವೆಂತಲು ಕರೆಯುತ್ತಾರೆ. ಅದಕ್ಕಾಗಿ ಈ ಬ್ರಾಹ್ಮಣರಿಗೆ ಗೌಡ ಸಾರಸ್ವತರೆಂದು ಹೇಳುತ್ತಾರೆ. ಇವರು ಋಗ್ವೇದದ ಉಪಾಸಕರು. ಸರಸ್ವತಿ ನದಿ ತಟದಲ್ಲಿ ನಾಗರಿಕತೆಯನ್ನು ಕಟ್ಟಿದವರು. ಒಮ್ಮೆ ಸರಸ್ವತಿ ನದಿಯು ಬತ್ತಿ ಹೋಯಿತು. ಗಂಗಾ ಯಮುನ ನದಿಗಳೊಂದಿಗೆ ಗುಪ್ತಗಾಮಿನಿಯಾಗಿ ಹರಿಯಿತು. ಆಗ ಸಾರಸ್ವತ ಬ್ರಾಹ್ಮಣರು ಚದುರಿ ಹೋಗಿ ಭಾರತದ ವಿವಿಧೆಡೆಗಳಲ್ಲಿ ವಾಸಿಸತೊಡಗಿದರು. ಹಾಗೆ ಹೋದ ಸಾರಸ್ವತರು ಆಯಾ ಊರಿನ ಹೆಸರಿನಿಂದ ಗುರುತಿಸಲ್ಪಟ್ಟರು. ಕಾಶ್ಮೀರಿ ಸಾರಸ್ವತರು, ಕಚ್ಛೀ ಸಾರಸ್ವತರು ಇತ್ಯಾದಿ. ಹಾಗೆಯೇ ಬಹುಮಂದಿ ಗೋವಾದಲ್ಲಿ ನೆಲೆಸಿದರು.

ಕ್ರಿ. ಶ. 16ನೇ ಶತಮಾನದಲ್ಲಿ ಗೋವಾದ ಮೇಲೆ ಪೋರ್ಚುಗೀಸರು ದಾಳಿ ಮಾಡಿದರು. ಪೋರ್ಚುಗೀಸರು ಗೋವಾದಲ್ಲಿ ಕ್ರೈಸ್ತಮತವನ್ನು ಪ್ರಚಾರ ಮಾಡಲಾರಂಭಿಸಿದರು. ಆಗ ಅನೇಕ ಸಾರಸ್ವತ ಬ್ರಾಹ್ಮಣರ ಕುಟುಂಬ ದಕ್ಷಿಣ ಕರಾವಳಿಯತ್ತ ವಲಸೆ ಬಂದರು. ಹೀಗೆ ತುಳುನಾಡಿನ ಮಂಗಳೂರು, ಉಡುಪಿ, ಕಾಸರಗೋಡು, ಬಾರ್ಕೂರು, ಬಸರೂರು, ಕಾರ್ಕಳ, ಕುಂದಾಪುರ, ಉತ್ತರ ಕನ್ನಡದ ಕಾರವಾರ, ಕುಮಟ ಇತ್ಯಾದಿ ಕಡೆಗಳಲ್ಲಿ ನೆಲೆಗೊಂಡರು. ಗೌಡ ಸಾರಸ್ವತ ಬ್ರಾಹ್ಮಣರು ಗೋವಾದಲ್ಲಿ ಪೋರ್ಚ್ರುಗೀಸರ ಆಕ್ರಮಣ ಪೂರ್ವದಲ್ಲಿಯೇ ಬಂದು ನೆಲೆಸಿದ್ದರು ಎನ್ನುವುದಕ್ಕೆ ಹಲವಾರು ಸಾಕ್ಷ್ಯಾಧಾರಗಳು ಲಭ್ಯ ಇವೆ. ಕೊಂಕಣಿಗರಿಗೆ ವಿದೇಶಿ ವ್ಯಾಪಾರದಲ್ಲಿನ ಪ್ರಭುತ್ವವನ್ನು ಗುರುತಿಸಿ ಕೊಚ್ಚಿಯ ರಾಜ ಅವರಿಗೆ ಆಶ್ರಯವನ್ನು ನೀಡಿರುತ್ತಾರೆ.

ಗೌಡ ಸಾರಸ್ವತ ಬ್ರಾಹ್ಮಣರು ಕರಾವಳಿ ತೀರದ ಪಟ್ಟಣಗಳಲ್ಲಿ ಹೆಚ್ಚಾಗಿ ವ್ಯಾಪಾರ ನಡೆಸುತ್ತಿದ್ದರು. ಇವರಲ್ಲಿ ಸಾರಸ್ವತರು, ಗೌಡ ಸಾರಸ್ವತರು, ಗುರ್ಜರ ಸಾರಸ್ವತರು, ಕಾಶ್ಮೀರಿ

ಸಾರಸ್ವತರು ಮುಂತಾದ ಪಂಗಡಗಳಿದ್ದವು. ಕೊಂಕಣಿಗಳು ಭಾರತದ ಪಶ್ಚಿಮ ಕರಾವಳಿಯ ಪ್ರಮುಖ ವರ್ತಕ ಸಮುದಾಯವಾಗಿದ್ದು, ಮುಂಬಯಿಯಿಂದ ಕೇರಳದವರೆಗೆ ವ್ಯಾಪಾರ ನಡೆಸುತ್ತಿದ್ದರು. ಗೌಡ ಸಾರಸ್ವತರು ಕರಿಮೆಣಸು, ಭತ್ತ, ಅಡಿಕೆ, ತೆಂಗು ಮುಂತಾದವುಗಳ ವ್ಯಾಪಾರ ನಡೆಸುತ್ತಿದ್ದರು. ಬಂದರು ಪಟ್ಟಣಗಳ ಒಳನಾಡುಗಳೊಂದಿಗೆ ನೇರ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಒಳನಾಡುಗಳಲ್ಲಿ ಬೆಳೆಯಲಾಗುತ್ತಿದ್ದ ವಾಣಿಜ್ಯ ಬೆಳೆಗಳನ್ನು ಮಾರುಕಟ್ಟೆಗಳಿಗೆ ತರುತ್ತಿದ್ದರು. ಕೃಷಿಕರಿಗೆ ಬೆಳೆಗಳನ್ನು ಬೆಳೆಯಲು ಹಣವನ್ನು ಸಾಲದ ರೂಪದಲ್ಲಿ ನೀಡುತ್ತಿದ್ದರು. ಸಾಲವನ್ನು ಮರುಪಾವತಿಸುವಲ್ಲಿ ಕೃಷಿಕರು ವಿಫಲರಾದರೆ ಆ ಕೃಷಿ ಭೂಮಿ ಇವರ ಸ್ವಾಧೀನಕ್ಕೆ ಬರುತ್ತಿತ್ತು.

ಹೀಗೆ ವ್ಯಾಪಾರದ ಜೊತೆಗೆ ಭೂಮಾಲೀಕರಾಗಿಯೂ ಇವರು ಕಾಣಿಸಿಕೊಂಡರು. ಲೇವಾದೇವಿಗಾರರಾಗಿ, ಮಧ್ಯವರ್ತಿಗಳಾಗಿ, ಬ್ರಿಟಿಷರ ವ್ಯಾಪಾರದ ಏಜಂಟರುಗಳಾಗಿ ಕೆಲಸ ಮಾಡಿ, ಸ್ಥಳೀಯ ಹಾಗೂ ಹೊರನಾಡುಗಳೊಂದಿಗಿನ ವ್ಯಾಪಾರದಲ್ಲೂ ಪ್ರಮುಖವಾಗಿ ಕಾಣಿಸಿಕೊಂಡರು. ಬ್ಯಾಂಕುಗಳನ್ನು ಸ್ಥಾಪಿಸಿಕೊಂಡರು. ಶ್ರೀಮಂತ ವರ್ತಕರಾಗಿ ಕಾಣಿಸಿಕೊಂಡ ಗೌಡ ಸಾರಸ್ವತ ಬ್ರಾಹ್ಮಣರು ಬ್ರಿಟಿಷ್ ಆಳ್ವಿಕೆಯುದ್ದಕ್ಕೂ ಸ್ಥಳೀಯರೊಂದಿಗೆ ಮತ್ತು ಬ್ರಿಟಿಷರೊಂದಿಗೆ ಸಹಕಾರ ಮತ್ತು ಸಹಯೋಗ ನೀತಿಗಳನ್ನು ಅನುಸರಿಸಿಕೊಂಡು ಬಂದರು.

ಗೌಡ ಸಾರಸ್ವತ ಬ್ರಾಹ್ಮಣರು ವಿಶಿಷ್ಟ ಬುದ್ಧಿಮತ್ತೆಯನ್ನು ಹೊಂದಿದ ಸಮಾಜವಾಗಿದೆ. ಶಿಕ್ಷಣ, ಬ್ಯಾಂಕಿಂಗ್, ವೈದ್ಯಕೀಯ, ಇಂಜಿನಿಯರಿಂಗ್ ಹೀಗೆ ಪಟ್ಟಿ ಮಾಡುತ್ತಾ ಹೋದರೆ ಇವರು ಕೈಯಾಡಿಸದ ಕ್ಷೇತ್ರವಿಲ್ಲ. ಕರ್ನಾಟಕ, ಕೇರಳದ ಕರಾವಳಿ ತೀರದಲ್ಲಿ ಆಯುರ್ವೇದ ಕ್ಷೇತ್ರಕ್ಕೆ ಇವರು ನೀಡಿದ ಕೊಡುಗೆ ಅನನ್ಯವಾಗಿದೆ. ಕೆಲವರು ಕೊಡುಗೆಯಲ್ಲಿ ಅಪಾರವಾಗಿದ್ದರು. ಅವರು ಇತಿಹಾಸದ ಪುಟದಲ್ಲಿ ಗುಪ್ತಗಾಮಿನಿಯಾಗಿ ಪ್ರವಹಿಸಿದ್ದಾರಷ್ಟೇ.

ಇದಕ್ಕೆ ಸಾಕ್ಷಿ ಕೊಚ್ಚಿಯ ಅಂದಿನ ಪ್ರಖ್ಯಾತ ವೈದ್ಯರಾದ ಬೈಸಿಕೆ ರಂಗಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಎಂಬ ಸಾರಸ್ವತ ಬ್ರಾಹ್ಮಣರು. ಅವರು ವೈದ್ಯಕೀಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅನನ್ಯವಾಗಿದೆ.

**ಜೀವ ವೈವಿಧ್ಯತೆಯ ಶ್ರೀಮಂತಿಕೆಯ ತಾಣ ಪಶ್ಚಿಮ ಘಟ್ಟ ಪ್ರದೇಶ :**

ಪಶ್ಚಿಮ ಘಟ್ಟಗಳು ಭಾರತ ಜಂಬೂದ್ವೀಪದ ಪಶ್ಚಿಮ ಭಾಗದಲ್ಲಿರುವ ಒಂದು ಪರ್ವತ ಶ್ರೇಣಿ. ಈ ಶ್ರೇಣಿಗೆ ಸಹ್ಯಾದ್ರಿ ಪರ್ವತಗಳು ಎಂಬ ಹೆಸರು ಸಹ ಇದೆ. ದಖ್ಖನ್

ಪೀಠಭೂಮಿಯ ಪಶ್ಚಿಮದ ಅಂಚಿನ ಉದ್ದಕ್ಕೂ ಹಬ್ಬಿರುವ ಪಶ್ಚಿಮ ಘಟ್ಟಗಳು ಪೀಠಭೂಮಿಯನ್ನು ಅರಬ್ಬೀ ಸಮುದ್ರದ ಕಿರಿದಾದ ಕರಾವಳಿ ಪ್ರದೇಶದಿಂದ ಬೇರ್ಪಡಿಸುತ್ತದೆ. ಮಹಾರಾಷ್ಟ್ರ – ಗುಜರಾತ್‌ಗಳ ಗಡಿಪ್ರದೇಶದಲ್ಲಿ ತಾಪ್ತಿ ನದಿಯ ದಕ್ಷಿಣದಲ್ಲಿ ಆರಂಭವಾಗುವ ಈ ಶ್ರೇಣಿಯು ದಕ್ಷಿಣಾಭಿಮುಖವಾಗಿ ಹಬ್ಬಿ ಕನ್ಯಾಕುಮಾರಿಯವರೆಗೆ ಇರುವುದು.

ಒಟ್ಟು ಸುಮಾರು 1600 ಕಿ. ಮೀ. ಉದ್ದವಿರುವ ಪಶ್ಚಿಮ ಘಟ್ಟಗಳು ಮಹಾರಾಷ್ಟ್ರ, ಗೋವಾ, ಕರ್ನಾಟಕ, ಕೇರಳ ಮತ್ತು ತಮಿಳುನಾಡಿನಲ್ಲಿ ಹಬ್ಬಿವೆ. ಈ ಪ್ರದೇಶವು ವಿಶ್ವದ ಅತ್ಯಂತ ಸಕ್ರಿಯ ಜೀವವೈವಿಧ್ಯದ ನೆಲೆಗಳಲ್ಲಿ ಒಂದಾಗಿದ್ದು 5,000 ಕ್ಕೂ ಹೆಚ್ಚಿನ ತಳಿಯ ಗಿಡಮರಗಳು, 139 ಬಗೆಯ ಸಸ್ತನಿಗಳು, 508 ಪ್ರಭೇದದ ಪಕ್ಷಿಗಳು ಮತ್ತು 179 ಪ್ರಕಾರದ ದ್ವಿಚರಿಗಳಿಗೆ ನೆಲೆಯಾಗಿವೆ. ವಿಶ್ವದಲ್ಲಿ ಅಳಿವಿನಂಚಿನಲ್ಲಿರುವ ಜೀವತಳಿಗಳ ಪೈಕಿ 325 ತಳಿಗಳ ಜೀವಿಗಳು ಪಶ್ಚಿಮ ಘಟ್ಟಗಳಲ್ಲಿ ನೆಲೆಸಿವೆ. ಪಶ್ಚಿಮ ಘಟ್ಟಗಳು ಭಾರತದ 5 ಶೇಕಡಾ ಭೂಭಾಗವನ್ನು ಮಾತ್ರ ಆವರಿಸಿದ್ದರೂ ದೇಶದ 27 ಶೇಕಡಾ ಪಾಲು ಮೇಲ್ದರ್ಜೆಯ ಸಸ್ಯಗಳು ಇಲ್ಲಿಯೇ ಇವೆ. ಜೊತೆಗೆ ಜಗತ್ತಿನ ಬೇರೆ ಯಾವ ಭಾಗದಲ್ಲಿಯೂ ಕಾಣದ 84 ಜಾತಿಯ ದ್ವಿಚರಿಗಳು, 16 ಪ್ರಕಾರದ ಪಕ್ಷಿಗಳು, 7 ತಳಿಯ ಸಸ್ತನಿಗಳು ಮತ್ತು 1600 ಹೂ ಬಿಡುವ ಸಸ್ಯಗಳು ಪಶ್ಚಿಮ ಘಟ್ಟಗಳಲ್ಲಿ ಇವೆ.

ಪಶ್ಚಿಮ ಘಟ್ಟ ಪ್ರದೇಶದಲ್ಲಿ ಜೀವ ವೈವಿಧ್ಯತೆಯ ಶ್ರೀಮಂತಿಕೆಯ ಒಳ–ಹೊರವುಗಳ ಕುರಿತು ಜ್ಞಾನ ತಲತಲಾಂತರದಿಂದ ಹಲವು ಮಂದಿಗೆ ಇತ್ತು. ಪಶ್ಚಿಮ ಘಟ್ಟ ಪ್ರದೇಶದ ಪ್ರಕೃತಿಯ ಮಡಿಲಲ್ಲಿ ಬೆಳೆದ ಬೈಸಿಕೆ ರಂಗಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಇವರಿಗೆ ಸಹಜವಾಗಿ ಹಿರಿಯರಿಂದ ಬಳುವಳಿಯಾಗಿ ಬಂದ ಪಾರಂಪರಿಕ ವೈದ್ಯಕೀಯ ಪದ್ಧತಿಯ ಅರಿವು ಇತ್ತು.

ಡಚ್ ನೌಕಾಧಿಕಾರಿಯಾಗಿದ್ದ ಹೆಂಡ್ರಿಕಸ್ ವ್ಯಾನ್ ರೀಡ್ ಎಂಬವರ ಸಂಪರ್ಕ ಅವರ ಜೀವನದ ದಶೆಯನ್ನು ಬದಲಿಸುತ್ತದೆ ಹಾಗೂ ಅವರ ಮಾರ್ಗದರ್ಶನದಲ್ಲಿ ಇವರು ವೈದ್ಯಲೋಕಕ್ಕೆ ನೀಡಿದ ಕೊಡುಗೆ ಈ ಸರಸ್ವತಿ ಪುತ್ರರ ಹೆಸರನ್ನು ಚರಿತ್ರೆಯ ಪುಟದಲ್ಲಿ ಸೇರಲು ಕಾರಣವಾಗುತ್ತದೆ. ಪಾರಂಪರಿಕ ವೈದ್ಯ ಪದ್ಧತಿಗೆ ಭದ್ರವಾದ ಬುನಾದಿಯನ್ನು ಹಾಕಿ ಕೊಟ್ಟ ಕೀರ್ತಿ ರಂಗಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಈ ತ್ರಿವಳಿಗಳಿಗೆ ಸಲ್ಲುತ್ತದೆ. ಇಂದಿನ ಸರಕಾರದಿಂದ ಮಾಡಲಸಾಧ್ಯವಾದ ಕೆಲಸವನ್ನು ಇವರುಗಳು ಯಾವುದೇ ಮೂಲಭೂತ ಸೌಕರ್ಯ ಇಲ್ಲದ ಅಂದಿನ ಕಾಲದಲ್ಲಿ ಮಾಡಿರುವುದು ಇವರ ಸಾಮರ್ಥ್ಯಕ್ಕೆ

ಹಿಡಿದ ಕೈಗನ್ನಡಿಯಾಗಿದೆ. ಸುಮಾರು 200 ಪುಟಗಳ ತಾಮ್ರದ ಹಾಳೆಯಲ್ಲಿ ಕೆತ್ತಿದ 12 ಸಂಪುಟಗಳಲ್ಲಿ ಮಾಡಿ ಬಂದ ಕೃತಿ ಅನನ್ಯವಾಗಿದೆ.

**ಹೋರ್ತುಸ್ ಇಂಡಿಕಸ್ ಮಲಬಾರಿಕುಸ್**

"ಹೋರ್ತುಸ್ ಇಂಡಿಕಸ್ ಮಲಬಾರಿಕುಸ್" ಕೃತಿ ರಂಗಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಎಂಬ ಸರಸ್ವತಿ ಪುತ್ರರ ಕುಂಚದಿಂದ ಮೂಡಿಬಂದ ರತ್ನವಾಗಿದೆ. ಇದರಲ್ಲಿ ಅಂದಿನ ಕಾಲದಲ್ಲಿ ಪಶ್ಚಿಮ ಘಟ್ಟ ಪ್ರದೇಶದಲ್ಲಿ ಲಭ್ಯವಿದ್ದ ವನೌಷಧಿಯ ಸಚಿತ್ರ ವಿವರಣೆ ದಾಖಲಾಗಿದೆ. ಕ್ರಿ. ಶ. 1675 ರಲ್ಲಿ ಡಚ್ ನೌಕಾಧಿಕಾರಿಯಾಗಿದ್ದ ಹೆಂಡ್ರಿಕಸ್ ವ್ಹಾನ್ ರೀಡ್ ಎಂಬವರು ಕೇರಳದಲ್ಲಿ ದೊರೆಯುವ ಎಲ್ಲಾ ವನೌಷಧಿಯ ಗುಣ, ಚಿತ್ರ ಉಪಯೋಗ ಮುಂತಾದವುಗಳ ಸಂಪೂರ್ಣ ವಿವರಗಳನ್ನೊಳಗೊಂಡ ಗ್ರಂಥವೊಂದನ್ನು ಲ್ಯಾಟಿನ್ ಭಾಷೆಯಲ್ಲಿ ಸಿದ್ಧಪಡಿಸಿಕೊಟ್ಟಿದ್ದರು. ಅವರಿಗೆ ಕೊಚ್ಚಿಯ ಅಂದಿನ ಪ್ರಖ್ಯಾತ ವೈದ್ಯರಾದ ರಂಗಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಎಂಬ ಸಾರಸ್ವತ ಬ್ರಾಹ್ಮಣರ ನೆರವು ಸಿಕ್ಕಿತು. ಆ ಗ್ರಂಥದೊಳಗಿನ ವಿವರಗಳು ಸುಳ್ಳೆನ್ನಬಾರದೆಂದು ಯಥಾರ್ಥವಾದವುಗಳೆಂದು ಅವರು ಪ್ರಮಾಣ ಪತ್ರವನ್ನು ಬರೆದು ಕೊಟ್ಟಿದ್ದರು. ಆ ಪ್ರಮಾಣ ಪತ್ರವು ಕೊಂಕಣಿ ಭಾಷೆಯಲ್ಲಿ ದೇವನಾಗರಿ ಲಿಪಿಯಲ್ಲಿದೆ ಅದರ ಅನುವಾದ ಲ್ಯಾಟಿನ್ ಭಾಷೆಯಲ್ಲಿ ಅದರ ಕೆಳಗೆ ಇದ್ದು ಈ ಗ್ರಂಥದ ಹೆಸರು "ಹೋರ್ತುಸ್ ಇಂಡಿಕಸ್ ಮಲಬಾರಿಕುಸ್" ಎಂದಿದೆ.

**ಉಪಸಂಹಾರ :**

ಗೌಡ ಸಾರಸ್ವತ ಬ್ರಾಹ್ಮಣರ ಇತಿಹಾಸ ಕೆದಕ್ಕುತ್ತಾ ಹೋದಾಗ ಇಂತಹ ಅಮೂಲ್ಯ ರತ್ನಗಳ ಉತ್ಖನನವಾಗುವುದರಲ್ಲಿ ಸಂಶಯವಿಲ್ಲ. ರಂಗಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಇವರು ಪಾರಂಪರಿಕ ವೈದ್ಯ ಲೋಕಕ್ಕೆ ನೀಡಿದ ಕೊಡುಗೆ ಅಪ್ರತಿಮ. ಆದರೆ ಈ ತ್ರಿವಳಿ ಸರಸ್ವತಿ ಪುತ್ರರು ಗುಪ್ತಗಾಮಿನಿಯಾಗಿ ವೈದ್ಯ ಲೋಕದ ಇತಿಹಾಸದಲ್ಲಿ ಪ್ರವಹಿಸಿದ್ದಾರೆ. ಮುಂದಿನ ಪೀಳಿಗೆಗೆ ನಮ್ಮ ಶ್ರೀಮಂತ ಪರಂಪರೆಯ ಪರಿಚಯ ನೀಡುವ ಅನಿವಾರ್ಯತೆ ಇದೆ. ಈ ಕಾಯಕವನ್ನು ಪಿ. ಜಿ. ಕಾಮತ್ ಫೌಂಡೇಶನ್‌ನವರು ಮಾಡ ಹೊರಟಿರುವುದು ಅಭಿನಂದನಾರ್ಹ ಕಾರ್ಯವಾಗಿದೆ.

# ಕೊಂಕಣಿಯವರ ಅಮೋಘ ಕೊಡುಗೆ

– ಶರತ್‌ಚಂದ್ರ ಶೆಣೈ



ಹೊರ್ತುಸ್ ಇಂಡಿಕುಸ್ ಮಲಬಾರಿಕುಸ್ (Hortus Indicus Malabaricus) ಎಂಬ ಲ್ಯಾಟಿನ್ ಭಾಷೆಯ ಪುಸ್ತಕವು, ಕೇರಳದ ಮಲಬಾರ್ ಪ್ರದೇಶದ ನೈಸರ್ಗಿಕ ಸಸ್ಯ ಸಂಪತ್ತಿನ ಕುರಿತು ಅಪೂರ್ವ, ಪ್ರಾಚೀನ ಹಾಗೂ ಸಂಪೂರ್ಣವಾದ ಒಂದು ಕೃತಿ. ಈ ಕೃತಿಯ 12 ಸಂಪುಟಗಳನ್ನು ಆಮ್ಸ್ಟರ್‌ಡ್ಯಾಮ್ ನಗರದಲ್ಲಿ 1678–1693ರ ಕಾಲಾವಧಿಯಲ್ಲಿ ಮುದ್ರಿಸಿ ಪ್ರಕಟಿಸಲಾಯಿತು. ಕೊಚ್ಚಿಯಲ್ಲಿ ಡಚ್ (ಈಗಿನ ನೆದರ್‌ಲ್ಯಾಂಡ್ಸ್) ಕಮಾಂಡರನಾಗಿದ್ದು ಮುಂದೆ ರಾಜ್ಯಪಾಲರಾದ ಹೆಂಡ್ರಿಕ್ ವಾನ್ ರೀಡ್ ಎಂಬವರು ಈ ಪುಸ್ತಕವನ್ನು ಪ್ರಕಟಿಸುವ ಕಾರ್ಯಗೈದರು. ಈ ಪುಸ್ತಕವು ಅನೇಕ ರೀತಿಯಲ್ಲಿ ಅದ್ವಿತೀಯವಾಗಿದೆ. ಅದು ಕೇರಳದ ಸಮಗ್ರ ಸಸ್ಯ ಸಂಪತ್ತಿನ ಕುರಿತು ಅಮೂಲ್ಯ ವಿವರಗಳನ್ನೊಳಗೊಂಡಿದೆ. ಇದು ಪ್ರಾಚೀನ ಹಾಗೂ ಕೇರಳದ ವೈದ್ಯರ ಪರಂಪರೆಯಲ್ಲಿ ಪೀಳಿಗೆಯಿಂದ ಪೀಳಿಗೆಗೆ ಹರಿದು ಬಂದ ಸಸ್ಯಗಳ ಔಷಧೀಯ ಗುಣಗಳ ವಿಶೇಷ ಮಾಹಿತಿಗಳನ್ನೊಳಗೊಂಡು ಪ್ರಕಟವಾದ ಪ್ರಥಮ ಕೃತಿ. ಪ್ರಪ್ರಥಮವಾಗಿ ಕೊಂಕಣಿ ಹಾಗೂ ಮಲಯಾಳ – ಕೇರಳದ ಎರಡು ಮುಖ್ಯ ಭಾಷೆಗಳು – ಈ ಪುಸ್ತಕದಲ್ಲಿ ಅಚ್ಚಾಗಿವೆ. ಇದರಲ್ಲಿ ಪ್ರತಿಯೊಂದು ಗಿಡ, ಬಳ್ಳಿ, ಮರಗಳ ಹೆಸರುಗಳನ್ನು ಲ್ಯಾಟಿನ್, ಮಲಯಾಳ, ಅರೆಬಿಕ್ ಹಾಗೂ ಕೊಂಕಣಿ ಭಾಷೆಗಳಲ್ಲಿ ಪ್ರಸ್ತುತಪಡಿಸಲಾಗಿದೆ.

ಈ ಪುಸ್ತಕವು ಹೆಂಡ್ರಿಕ್ ವ್ಹಾನ್ ರೀಡ್‌ರವರ ಅಸಾಧ್ಯವಾದ ಇಚ್ಛಾಶಕ್ತಿಯ ಫಲವಾಗಿದ್ದರೂ, ಸಸ್ಯಗಳ ಕುರಿತಾದ ಮೂಲ ಮಾಹಿತಿಗಳ ಸಂಗ್ರಹ ಕಾರ್ಯವನ್ನು ಮೂವರು ಕೊಂಕಣಿ ವೈದ್ಯರಾದ ರಂಗಭಟ್, ವಿನಾಯಕ ಪಂಡಿತ್ ಮತ್ತು ಅಪ್ಪು ಭಟ್‌ರವರು ಗೈದರು. ಈ ಮೂವರು ಈ ಕುರಿತು ಪುಸ್ತಕದ ಪ್ರಥಮ ಸಂಪುಟದಲ್ಲಿ ದೃಢೀಕರಿಸಿರುವರು. ಪುಸ್ತಕದಲ್ಲಿ ಕೊಂಕಣಿಯನ್ನು Lingua Bramanica Antiqua ಎಂದು ಸೂಚಿಸಲಾಗಿದೆ.

ಆದರೆ ಈ ಪುಸ್ತಕದಲ್ಲಿ ಕೊಂಕಣಿ ಭಾಷೆಯಲ್ಲಿರುವುದು ಈ ದೃಢೀಕರಣ ಮಾತ್ರವಲ್ಲ. ಪ್ರತಿಯೊಂದು ಗಿಡ, ಮರ, ಬಳ್ಳಿಗಳ ಕೊಂಕಣಿ ಹೆಸರುಗಳನ್ನು ಪುಸ್ತಕದ ವಿವರಣೆಗಳಲ್ಲಿ

ಹಾಗೂ ಅವುಗಳ ಚಿತ್ರಗಳ ಅಡಿಯಲ್ಲಿ ಟಿಪ್ಪಣಿಯಾಗಿಯೂ ಎಲ್ಲಾ 12 ಸಂಪುಟಗಳಲ್ಲಿಯೂ ಕೊಡಲಾಗಿದೆ. ಮುಖ್ಯವಾಗಿ ರೋಮನ್ ಲಿಪಿಯಲ್ಲಿ ಕೊಡಲಾಗಿದ್ದರೂ ಚಿತ್ರಗಳ ಪಕ್ಕದಲ್ಲಿ ಮೂಲವಾದ ದೇವನಾಗರಿ ಲಿಪಿ (ಬ್ರಾಹ್ಮಣಿಕ) ಯಲ್ಲಿ ತಿಳಿಸಲಾಗಿದೆ.

ಈ ಪುಸ್ತಕವು ಆ ಕಾಲದಲ್ಲಿ ವಿಶ್ವದಲ್ಲಿ ವ್ಯಾಪಕವಾಗಿ ಪ್ರಚಲಿತವಾಗಿದ್ದ ಲ್ಯಾಟಿನ್ ಭಾಷೆಯಲ್ಲಿದ್ದರೂ, ಮತ್ತು ಪುಸ್ತಕದ ವಿಷಯವು ಕೇರಳದ (ಮಲಬಾರ್ ಪ್ರದೇಶ) ಸಸ್ಯಗಳ ಕುರಿತಾಗಿದ್ದರೂ ಹೆಂಡ್ರಿಕ್ ವ್ಯಾನ್ ರೀಡ್‌ರವರು ಈ ಮಹಾಕೃತಿಯಲ್ಲಿ ಪ್ರತಿಯೊಂದು ಸಸ್ಯದ ಹೆಸರನ್ನು ಕೊಂಕಣಿ ಭಾಷೆಯಲ್ಲಿ ಬರೆಯಲು ಒಂದು ಮಹತ್ತಾದ ಕಾರಣವಿದೆ. ಮೊದಲನೆಯದಾಗಿ ಆ ಕಾಲದಲ್ಲಿ ಕೊಂಕಣಿ ವೈದ್ಯರು ಗೋವಾ ಮತ್ತು ಕೊಚ್ಚಿಯಲ್ಲಿ ಸಮಾನವಾಗಿ ಪ್ರಸಿದ್ಧರಾಗಿದ್ದು, ಹಲವರು ತಮ್ಮ ತಮ್ಮ ಪ್ರದೇಶಗಳಲ್ಲಿ ರಾಜವೈದ್ಯರೂ ಆಗಿದ್ದರು. ಈ ವಿಷಯವು ಚರಿತ್ರೆಗಳಲ್ಲಿ ಲಭ್ಯವಿದೆ. ಅಂತೆಯೇ, ಸುಮಾರು ಒಂದು ಶತಮಾನದ ಹಿಂದೆ ಗಾರ್ಸಿಯಾ ಡಿ ಓರ್ಟಾ ಎಂಬ ಲೇಖಕರು ತಮ್ಮ 'Coloquios Dos Simplex and Dogras'ಎಂಬ ಪೋರ್ಚುಗೀಸ್ ಭಾಷೆಯ, ಗೋವಾದ ಸಸ್ಯಗಳ ಕುರಿತಾದ ಪುಸ್ತಕವನ್ನು ಗೋವಾದಲ್ಲಿದ್ದ ಕೊಂಕಣಿ ವೈದ್ಯರ ಸಹಕಾರದಿಂದಲೇ ಸಂಗ್ರಹಿಸಿ ಬರೆದಿದ್ದರೆಂಬುದೂ ಎಲ್ಲರಿಗೂ ತಿಳಿದ ವಿಷಯವಾಗಿತ್ತು.

ಅದಲ್ಲದೆ ಅವರು (ಹೆಂಡ್ರಿಕ್ ವ್ಯಾನ್ ರೀಡ್) ಈ ಪುಸ್ತಕವನ್ನು ರಚಿಸುವ ತಮ್ಮ ಕನಸನ್ನು ನನಸಾಗಿಸಲು ಬಹಳ ಸಹಕರಿಸಿದ ಕೊಚ್ಚಿಯ, ಹಿಂದೆ ಕೇಳಿದ, ಮೂವರು ವೈದ್ಯರಿಗೆ ಧನ್ಯವಾದವನ್ನು ಅರ್ಪಿಸಲೇಬೇಕಾಗಿತ್ತು. ಅವರ ಜನರೇ ಅಲ್ಲದೆ ಇತರ ಹೆಚ್ಚಿನ ಮಲಬಾರಿಗಳ ಮನೋವೃತ್ತಿಗೆ ತೀರ ವಿಪರೀತವಾಗಿ ಆ ಮೂವರು ವೈದ್ಯರು ನಿಸ್ವಾರ್ಥ ಮನೋಭಾವನೆಯಿಂದ ಅವರ ಜೀವನದ ಎರಡು ವರ್ಷ ಪೂರ್ತಿ ಈ ಪುಸ್ತಕದ ರಚನೆಗಾಗಿ ಸಹಕರಿಸಿದರಲ್ಲದೆ, ಈ ಕ್ಷೇತ್ರದಲ್ಲಿದ್ದ ತಮ್ಮ ಅಮೂಲ್ಯವಾದ ಜ್ಞಾನವನ್ನು, ಸ್ವಂತ ಅನುಭವಗಳನ್ನೂ ಹಂಚಿಕೊಂಡರು. ಎರಡು ವರ್ಷಗಳು ಸತತವಾಗಿ ನಿರೀಕ್ಷೆಗೂ ಮೀರಿ ಬಹಳ ಶ್ರಮ ವಹಿಸಿದರು. ಹೆಂಡ್ರಿಕ್ ವ್ಯಾನ್ ರೀಡ್‌ರವರು ಸ್ವತಃ ಅವರ ಮನೆಗಳಿಗೆ ಬಂದಿದ್ದರು. ಆ ವೈದ್ಯರುಗಳು ತಮ್ಮ ಪರಂಪರೆಯ ಈ ವಿಜ್ಞಾನವನ್ನು ಸುಲಭವಾಗಿ ನೆನಪಿಡಬಹುದಾದ ಪದ್ಯಗಳ ಮೂಲಕ ಕಾಪಾಡಿಕೊಂಡು ಬರುವ ವಿಧಾನವನ್ನು ನೋಡಿ ಹೆಂಡ್ರಿಕ್ ವ್ಯಾನ್ ರೀಡ್‌ರವರು ಆಶ್ಚರ್ಯಚಕಿತರೂ ಪ್ರಭಾವಿತರೂ ಆದರು. ಆ ಪುಸ್ತಕಗಳ ಮೂರನೇ ಸಂಪುಟದಲ್ಲಿ ಅವರು ಈ ಅದ್ಭುತ ಅನುಭವವನ್ನು ವಿವರವಾಗಿ ಬರೆದಿದ್ದಾರೆ.

ಆ ಮೂವರು ಕೊಂಕಣಿ ವೈದ್ಯರು ಬರೆದ ದೃಢೀಕರಣವು ನೈಜವಾಗಿಯೂ, ಕ್ಲಪ್ತವಾಗಿದ್ದರೂ ಈ ರಚನೆಗಳ ಹಿಂದೆ ಇದ್ದ ಅಗಾಧ ಕೆಲಸ ಕಾರ್ಯಗಳ ಕುರಿತೂ ವಿವರಗಳನ್ನೊಳಗೊಂಡಿದೆ. ನಿಜವಾಗಿಯೂ ನೋಡಿದರೆ ಅವರು ತಮ್ಮ ಹಿರಿಯರು ಅಥವಾ ಅವರ ಪಾಂಡಿತ್ಯದ ಕುರಿತು ಚಕಾರವನ್ನೂ ಎತ್ತಲಿಲ್ಲ. ಅದರ ಬದಲು, ಅವರು ನಡೆಸಿದ ಪರಿಶ್ರಮ ಹಾಗೂ ಕೆಲಸದ ವ್ಯಾಪ್ತಿಯ ಕುರಿತು ಮಾತ್ರ ತಿಳಿಸಿರುವರು.

ಹೀಗೆ ಈ ಮೂವರು ತಾವೇ ಈ ಪುಸ್ತಕವನ್ನು ಸಂಗ್ರಹಿಸಿರುವುದಾಗಿ ಸ್ಪಷ್ಟೀಕರಿಸಿರುವರು ಹಾಗೂ ತಜ್ಞರಾದವರನ್ನು ಮಲಬಾರಿನ ವಿವಿಧ ಸ್ಥಳಗಳಿಗೆ ಕಳುಹಿಸಿ, ಆಯಾ ಕಾಲದ ಔಷಧೀಯ ಸಸ್ಯಗಳನ್ನು ಅವುಗಳ ಮೌಲ್ಯ ತೆತ್ತು ತರಿಸಿರುವುದಾಗಿ ಹೇಳಿರುವರು. ಅವರು ಮೂವರೂ ಇವುಗಳ ಮೇಲ್ವಿಚಾರಣೆ ನಡೆಸುತ್ತಿದ್ದು ವಿವಿಧ ಗಿಡ, ಬಳ್ಳಿ, ಮರ ಇತ್ಯಾದಿಗಳ ಚಿತ್ರವನ್ನೂ ರಚಿಸಿರುವರು. 1635ಕ್ಕೆ ಹಿಂದಿನ ಎರಡು ವರ್ಷಗಳಲ್ಲಿ ಅವರು ಮೂವರೂ ತಮ್ಮನ್ನು ಇದೇ ಕೆಲಸದಲ್ಲಿ ಪೂರ್ಣ ತೊಡಗಿಸಿಕೊಂಡಿದ್ದರು.

ಇದರಿಂದ Hortus Indicus Malabaricus ಎಂಬ ಕೃತಿಯು ನಮ್ಮ ಹಿರಿಯರು 17ನೇ ಶತಮಾನದಲ್ಲಿ ಇತ್ತ ಒಂದು ಮಹಾ ಕೊಡುಗೆ. ಇದರ ಕುರಿತು ಹೆಮ್ಮೆ ಪಡಲು ಒಂದಕ್ಕಿಂತಲೂ ಹೆಚ್ಚು ಕಾರಣಗಳಿವೆ. ಎರಡನೆಯದಾಗಿ ತಮ್ಮ (ನಮ್ಮ) ಮಾತೃಭಾಷೆಯಾದ ಕೊಂಕಣಿಯ ಮೇಲೆ ಅವರಿಗಿದ್ದ ಅಪಾರ ಪ್ರೀತಿ ಮತ್ತು ಅಭಿಮಾನ ಎಲ್ಲಾ 12 ಸಂಪುಟಗಳಲ್ಲಿಯೂ, ಎಲ್ಲಾ ಔಷಧೀಯ ಸಸ್ಯಗಳ ಕೊಂಕಣಿ ಭಾಷೆಯ ಹೆಸರನ್ನು ತಿಳಿಸಿದಲ್ಲದೆ ಈ ಕುರಿತು ಸ್ಪಷ್ಟೀಕರಣವನ್ನು ಸಹಿ ಮಾಡಿಕೊಟ್ಟರು.

17 ನೇಯ ಶತಮಾನದಲ್ಲಿ ಬರವಣಿಗೆಯ ರೀತಿ, ವಿಧಾನಗಳು ಈಗ ಅಪರಿಚಿತವಾಗಿರಬಹುದು. ಮುಂದಿನ ಅಚ್ಚುಗಳಲ್ಲಿ ಕೆಲವು ಚಿಹ್ನೆಗಳು (ಅನುಸ್ವಾರಗಳು) ಕಾಣಿಸಿಕೊಳ್ಳಲಿಲ್ಲ. ಹಾಗಾಗಿ ಓದಲು ಸುಲಭವಾಗಿರುವಂತೆ ಕಾಣೆಯಾದ ಚಿಹ್ನೆಗಳನ್ನು ಸೇರಿಸಿ ಶಬ್ದಗಳ ನಡುವೆ ಅಂತರವನ್ನಿರಿಸಿ ಇನ್ನಷ್ಟು ಸ್ಪಷ್ಟವಾಗಿ, ದೃಢೀಕರಣ ಪತ್ರವನ್ನು ಇಲ್ಲಿ ಕೊಡಲಾಗಿದೆ.



(ಅನುವಾದ : ಯಂ. ರಂಗನಾಥ ಮಲ್ಯ)

# ಕೊಂಕಣಿ ಪ್ರಮಾಣ ಪತ್ರದಲ್ಲಿರುವ ಶಬ್ದಗಳ ಅರ್ಥ

– ಎನ್. ಪುರುಷೋತ್ತಮ ಮಲ್ಯ



[ಪದ್ಮಶ್ರೀ ಪುರಸ್ಕಾರವನ್ನು ಪಡೆದಿರುವ ಪುರುಷೋತ್ತಮ ಮಲ್ಯರ "The Role of Konkani Brahmin Ayurvedic Physicians Ranga Bhat, Vinayak Pandit and Appu Bhat of Cochin in the Compilation of Hortus Indicus Malabaricus - Revelation of the True Facts Hiterto Hidden and History of Konkanis During the Dutch Colonial Period" ಎಂಬ ಪುಸ್ತಕದಿಂದ ಆಯ್ದದ್ದು.]

| | | | |
|---|---|---|---|
| स्वस्ति | A Particle, meaning "May it be Well" with (one) often used at the beginning of letters | विनायक पंडित | Vinayaka Pandit |
| | | आपू भट | Appu Bhat |
| | | तेग | Three |
| | | वैद्य | Physicians |
| | | तानिं | They |
| श्री | The mark/ insignia of greatness | कोचिचा | of Cochin |
| | | कुमदोर | Commander |
| शालिवाहन | Salivahana | आंड्रिकि फांड्रे | Andrike Fandre |
| शक | Saka era | त्याचा | His |
| १५९७ | 1597 | निरोपान | with permission |
| राक्षस | Rakshasa | हय | this |
| संवत्सर | Samvatsara | मलबार | Malabar |
| चैत्र | Chaitra | देशान्तु | Region |
| बहुल | Dark half | आशिले | existing |
| १० | Tenth | ओषध | Medicinal |
| कोचि | Cochin | मात्र | only |
| राजपटणी | Raja's Town | वृक्ष | Trees |
| बैसिके | Residing | वालि | Creepers |
| रंग भट | Ranga Bhat | झाड | Plants |
| तथा | so also | खंद | branches |

| | | | |
|---|---|---|---|
| ओळखतेल्या | known | त्यां त्या | that that |
| मनुष्याक | person | ओपधाचे | of Medicine |
| मुसारो | honorarium | गुण | effect |
| देवूनु | given | वा | or |
| ते ते | that that | अनुभवान | knowledge derived from personal experiment |
| गांवातु | places | | |
| पेट्टवून | sent | | |
| तिं तिं | that that | जो जो | what |
| वोखद | Medicine | गुण | effect |
| आणवून | Brought | आमका | to us |
| त्या त्या | that that | कळेलो | made known |
| झाडाचें | Plants | ता | that |
| फल | fruit | वा | or |
| फूल | flower | त्या | that |
| पान | leaves | ओखदांची | of Medicine |
| बीज | seeds | नांव | names |
| समस्त | all | पळेउन | noted |
| त्या त्या | that that | आजि | today |
| ऋतु | seasonal | दानि | two |
| काळावरि | time | वर्प | years |
| मपादुन | after collections made | सकाणि | morning |
| तिं तिं | that that | साजे | evening |
| चितारिली | Pictured | आमिं | we |
| त्या | that | लागि | nearby |
| उपरांत | afterwards | राबून | standing |
| आमि | we | हा | this |
| आमगेल्या | our | लिव्रु | book |
| वैद्य | Physicians | मपादुन | editing |
| ग्रंथाचा | books | दिला | given |
| निघंटा | dictionary | तें | that |
| प्रमाणिं | based on authority | लटिक | false |

| | | | |
|---|---|---|---|
| अशि | like that | म्हणु | so saying |
| म्हाणुंचाक | to say | मानुचे | acceptance |
| नज | No | जाइद | affimed |
| अशि | thus | म्हणु | so saying |
| म्हणु | saying | नागर | Devanagari |
| आमिं | we | वरपान | Script |
| आमंचि | our | ह | thus |
| निसाणि | signature | बरवूनु | writing |
| कर्णु | affixing | दिलां | given |
| दिली | given | श्री: | Insignia of |
| ते | that | | greatness |
| सत्य | true | | or dignity |



# Contribution of Konkanis to 'Hortus' with reference to Ayurveda

**Dr. V. Rajeev Shenoy**



I have great pleasure and pride to write about the contribution of Konkan Brahmins to Hortus with respect to Ayurveda. My humble attempt is to infuse authentic knowledge of Ayurvedic medicines applied by our people : Ayurvedic Doctors.

They could inherit the knowledge from their father, grandfather etc ; who in turn learned from Vedic Sootras. Their inherent Sanskrit knowledge might have opened enough ventilation to Ayurvedic study – its implications as well as applications.

They were told to explain Ayurvedic medicines just from the local plants – its roots, flowers, fruits, leaves, nuts etc which were delivered to them by our Mother Earth at Malabar west coast area about which 'Hortus' is dealt with. They could preserve them scientifically and reserve them for the treatment of mankind.

Not only our Ayurvedic doctors in the past were experts in treatment, but also exported their knowhow to western countries.

Incidentally let us go back to the Goan Ayurvedic scholars who settled in Kochi, even before the 17th century. This time-tested truth was convinced to the western people without any shadow of doubt. Hence the western experts welcomed our doctors for their Ayurvedic applications.

The Testimonium given in the 'Hortus' may be the first evidence of Konkani scripts. It is written in Devanagari as like Sanskrit.

In the testimonium, the three of them have mentioned about a "Nighantu" with them. They referred the same if they had any doubt.

It is told that "Nighantu Vina Vaidya, Vidwan Vyakaranam Vina ,

Ayudham Vina Yodha" (Raja Nighantu) i.e, without a Nighantu, a Vaidya cannot excel; without grammar a Vidwan cannot excel; and without a weapon a Soldier cannot withstand . It is a Pramanam in Sanskrit.

It may be a Maha Nighantu (maha means the great or precious), the oldest Dhanwantari Nighantu for which the author is unknown. Referring Amarakosa by Amara Simha, "Vanoushadhi varga" is similar to Dhanwantari Nighantu. So it may be before 6th century. (Introduction to Ayurvediya Oushadha Nighantu in Malayalam by Thaiyil Kumaran Krishnan)

Oldest Dhanwantari Nighantu is the upadesha given by Lord Dhanwantari to his disciples. These I say only to state the knowhow of these three Brahmins about Ayurveda.

For thousands of years, in many countries of the world including India, remedies from medicinal plants have cured a lot of people from all kinds of diseases, the most important advantage being no side-effects on the body.

So, the tradition of medicinal plants use in India is thousands of year old, the Rig Veda (4500 -1600 BC) is perhaps the oldest document where medicinal plants have been described. Karanja, Kinushka, Palasha, Semala, to name a few.

Yajur Veda tells about a few more plants and few diseases are named such as Arsas, Yashma, Sleepadam, Kushtam etc.

Atharva Veda tells about the treatment via medicinal plants and is the origin of Ayurveda. It mentions diseases like Apasmara (Epilepsy),

Athisara (Diarrhoea), Athimoothratha (Excessive urination). It explains 4 types of herbs as atharvani, aagirasi, daivi and manushyaja. It also talks about the curing properties of water, air and also about the lifestyle for a healthy mind and body.

Vedas are regarded as the treasure house of ancient wisdom of Indian Civilization and culture and it used to be a custom in Brahmins to learn the Vedas in childhood orally from a Guru in Sanskrit. It is rightly said 'Vedadhyanam Sarvam Gurvadhyana poorvakam' i.e, they can be learnt only from a guru; and the verses are impressed on the memories of young children as they say their memory has greater vigour then, and can be retained. All this is done with such skill that if anyone mentions the name of a plant, a Brahmin can tell you offhand all it has or can be said about it.

The brilliance of the three scholars who contributed to Hortus, namely Ranga Bhat, Vinayaka Pandit and Appu Bhat shows they were well versed in Vedas, Vedantas and Sasthrarthas.

In Ayurveda, about 1400 plants are documented in various texts like Charaka Samhita, Sushrutha Samhita and Ashtanga Hrudaya. HORTUS MALABARICUS is a comprehensive treatise that deals with the medicinal properties of the flora in Malabar.

The book by Hendrik Van Rheede was edited by the 3 Konkani scholars and Ayurvedic physicians alongwith a Malayali physician, Itti Achuthan.

Comprising of 12 volumes with 794 copper engravings on it illustrating about 742 plants, it is believed to be earliest printed work on the flora of Asia and tropics (1678-1693).

Today, India has about 15,000 species of medicinal plants and 8,000 of these are used as : Ayurveda-1768 species, Siddha-1121 species, Unani-751 species and rest as tribal and folk medicine.

Our forefathers knew better, they developed a system of living, prayer, the right food, exercise and nature's medicine. Their concept that 'Jagathyevam Anoushadham' what we saw in the nature are medicines, tested and trusted by generations for healthy living.

According to the text, 'Sarvesham Khanda Sakhanam Suranam Sreshtam Uchyate'. Among stems of plants and root, this is considered the Pathya (best).

Hortus Indicus Malabaricus, written in 17th century, is one of the greatest achievements in the history of plant documentation. This shows that long ago the Konkan Brahmins were aware of Ayurvedic concepts of medicinal plants and its uses. The morphology explained still serves as identification aid for many plants. The parts used and their method of usage explained in the book is very simple and can be used as home remedies.



# ಮಲಬಾರಿನ ಸಸ್ಯ ಜಗತ್ತಿಗೊಂದು ಇಣುಕು ಕಿಟಕಿ

– ಸ್ಮಿತಾ ಶೆಣೈ



'ಹೋರ್ತುಸ್ ಮಲಬಾರಿಕುಸ್' ಎಂಬ ಸಸ್ಯ ವರ್ಗೀಕರಣ ಶಾಸ್ತ್ರದ ಮೂಲ ಗ್ರಂಥ ತಯಾರಾದದ್ದು ನಮ್ಮ ನೆರೆ ರಾಜ್ಯ ಕೇರಳದಲ್ಲಿ. ಈ ಗ್ರಂಥ ಅತ್ಯಮೂಲ್ಯ ವೈದ್ಯಕೀಯ ಮಾಹಿತಿಗಳ ಆಕರ ಗ್ರಂಥವಾಗಿದೆ. ಸಸ್ಯ ಶಾಸ್ತ್ರದ ಅಮೂಲ್ಯ ಮಾಹಿತಿಯನ್ನು ಹೊಂದಿರುವ ಈ ಗ್ರಂಥವನ್ನು 1678 ರಿಂದ 1693ರ ನಡುವೆ ಆಗಿನ ಕೊಚ್ಚಿಯ ಡಚ್ ಗವರ್ನರ್ ಆಗಿದ್ದ ಹೆಂಡ್ರಿಕ್ ಆಡ್ರಿಯಾನ್ ವ್ಯಾನ್ ರೀಡ್ ಟೋಟ್ ಡ್ರಾಕೆನ್‌ಸ್ಟ್ರೇಯನ್ ಎನ್ನುವವರು ಸಂಸ್ಕರಿಸಿ ಪ್ರಕಟಿಸಿದರು.

ಗೋವಾದಿಂದ ಕನ್ಯಾಕುಮಾರಿವರೆಗೆ ಹರಡಿರುವ (900 ಕಿಮೀ., 74 ರಿಂದ 200 ಕಿ.ಮೀ.ನ ವರೆಗೆ ಅಗಲವಿರುವ) ಪ್ರದೇಶವನ್ನು ಮಲಬಾರ್ ಎಂದು ಕರೆಯುತ್ತಾರೆ. 'ಹೋರ್ತುಸ್ ಮಲಬಾರಿಕುಸ್' ಹನ್ನೆರಡು ಸಂಪುಟಗಳಲ್ಲಿ ಮಲಬಾರ್ ಭಾಗದ ಸಸ್ಯಗಳು, ಅವುಗಳ ಬಹುಪಯೋಗ ಹಾಗೂ ಆಯುರ್ವೇದ ಶಾಸ್ತ್ರ ಬೆಳೆದು ಬರುವುದಕ್ಕೂ ಮೊದಲಿನ ಕಾಲಘಟದಲ್ಲಿ ವೈದ್ಯಕೀಯವಾಗಿ ಗಿಡಗಳ ಬಳಕೆ ಮತ್ತು ಸಾಂಪ್ರದಾಯಿಕ ಪ್ರಯೋಗದ ಮಾಹಿತಿಯನ್ನು ನೀಡುತ್ತದೆ.

'ಹೋರ್ತುಸ್ ಮಲಬಾರಿಕುಸ್' ಬರೆಯುವಾಗ ಗೌಡ ಸಾರಸ್ವತ ಬ್ರಾಹ್ಮಣ ಸಮುದಾಯದ ಕೊಂಕಣಿ ಆಡು ಮಾತಿನವರಾದ ಆಗಿನ ಜನಪ್ರಿಯ ವೈದ್ಯ ರಂಗ ಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಎಂಬುವವರಿಂದ ಹಾಗೂ ಇಟ್ಟಿ ಅಚ್ಚುದನ್ ಎನ್ನುವ ಮಲಯಾಳಿ ವೈದ್ಯರಿಂದ ಮಾಹಿತಿಯನ್ನು ಮೌಖಿಕ ರೂಪದಲ್ಲಿ ಹೇಳಿ ಅದನ್ನು ಕೂಲಂಕುಷ ಪರೀಕ್ಷೆಗೊಳಪಡಿಸಿ ಪುನರ್ ಪರೀಶಿಲಿಸಿ ಸಾಮಾನ್ಯ ಒಪ್ಪಿಗೆ ಪಡೆದ ನಂತರ ಪೋರ್ಚುಗೀಸ್ ಭಾಷೆಗೆ ಭಾಷಾಂತರಿಸಿ ಕರಡನ್ನು ತಯಾರಿಸಲಾಯಿತು. ಕೊನೆಯ ಕರಡನ್ನು ಡಚ್ ಈಸ್ಟ್ ಇಂಡಿಯಾ ಕಂಪೆನಿಯ ಅಧಿಕಾರಿಗಳು ಅನುಮೋದಿಸಿದ ಬಳಿಕ ಲ್ಯಾಟೀನ್ ಭಾಷೆಗೆ ತರ್ಜುಮೆಗೊಳಿಸಿ ಕೃತಿಯನ್ನು ಪ್ರಕಟಿಸಲಾಯಿತು.

12 ಸಂಪುಟಗಳ ಈ ಬೃಹತ್ ಗ್ರಂಥದಲ್ಲಿ ಗಿಡ, ಮರ, ಬಳ್ಳಿಗಳ ವಿಸ್ತೃತ ಮಾಹಿತಿ ಇದೆ. ಗಿಡಗಳು ಬೆಳೆಯುವ ಕ್ಷೇತ್ರ, ಪತ್ರ ವಿನ್ಯಾಸ, ಹೂ, ಹಣ್ಣು, ಬಣ್ಣ, ಪರಿಮಳ, ರುಚಿ ಹಾಗೂ ಬಳಕೆಗಳ ಬಗ್ಗೆ ನಿಖರ ಮಾಹಿತಿ ಇದೆ. ಒಂದೇ ಕುಟುಂಬದ ಗಿಡಗಳ ಫಲಪುಷ್ಪ

ವೈವಿಧ್ಯಗಳ ಬಗ್ಗೆ ಪುಂಖಾನುಪುಂಖವಾಗಿ ವಿವರಿಸಲಾಗಿದೆ. ಮಲಬಾರ್ ಭಾಗಕ್ಕೆ ಸೇರಿದ ಔಷಧೀಯ ಸಸ್ಯಗಳ ಹೂ, ಹಣ್ಣು, ತರುಲತೆಗಳ ಮಾಹಿತಿ ನೀಡಲಾಗಿದೆ. ಗಿಡಗಳ ಮಲಯಾಳಂ ಹಾಗೂ ಲ್ಯಾಟೀನ್ ಹೆಸರುಗಳನ್ನು ರೋಮನ್, ಮಲಯಾಳಂ ಹಾಗೂ ಅರೇಬಿಕ್ ಲಿಪಿಗಳಲ್ಲಿ ಮತ್ತು ಕೊಂಕಣಿ ಹೆಸರುಗಳನ್ನು ದೇವನಾಗರಿ ಲಿಪಿಯಲ್ಲಿ ಬರೆಯಲಾಗಿದೆ. ಗ್ರಂಥದಲ್ಲಿ ಉಲ್ಲೇಖಿಸಲಾದ ಎಲ್ಲಾ ಗಿಡಗಳ ಭಾಗಗಳ ಮನಮೋಹಕ ಚಿತ್ರ ವಿವರಣೆ ಇದೆ. ಚಿತ್ರಗಳು ನಿಖರತೆಯಿಂದ ಕೂಡಿದ್ದವಾದ್ದರಿಂದ ಮೂರು ಶತಮಾನಗಳಿಂದ ಸಸ್ಯ ಶಾಸ್ತ್ರದ ಪುಸ್ತಕಗಳಲ್ಲಿ ಮತ್ತು ಜರ್ನಲ್‌ಗಳಲ್ಲಿ ಬಳಕೆಯಾಗುತ್ತಿವೆ. 'ಹೋರ್ತುಸ್ ಮಲಬಾರಿಕುಸ್' ಮಲಯಾಳಂ ಲಿಪಿಯ ಹಾಗೂ ದೇವನಾಗರಿ ಲಿಪಿಯ ಅಕ್ಷರಗಳನ್ನು ಹೊಂದಿದ ಮೊದಲನೆಯ ಬ್ಲೊಕ್ ಮುದ್ರಿತ ಗ್ರಂಥ. ಅಲ್ಲದೇ ಮಲಯಾಳಂ ಭಾಷೆಯ ಎರಡು ಬೇರೆ ಬೇರೆ ಲಿಪಿಗಳನ್ನು ಬಳಸಿದ ಕೀರ್ತಿಯು ಈ ಗ್ರಂಥಕ್ಕೆ ಸಲ್ಲುತ್ತದೆ.

## ಕಾರ್ಲ್ ಲಿನ್ನೆಯಸ್

ಮಾನವ ವಿಕಾಸದ ಇತಿಹಾಸದಲ್ಲಿ ವಸ್ತುಗಳ ನಾಮಕರಣದ ವಿಚಾರ ಬಂದಾಗ ಭಾಷಾ ಬಳಕೆ ಪ್ರಮುಖ ಪಾತ್ರವಹಿಸುತ್ತದೆ. ದೂರದ ಭೂಪ್ರದೇಶಗಳನ್ನು ಕಂಡುಹಿಡಿಯಲು ಮಾಡಿದ ಸಾಗರ ಯಾನ, ಯುದ್ಧ, ಹಾಗೂ ಸಾಂಕ್ರಾಮಿಕ ರೋಗಗಳಿಂದ ಜನರು ಮಾಡಿದ ದೂರ ಪ್ರಮಾಣ, ವ್ಯಾಪಾರ ವಹಿವಾಟುಗಳಿಂದಾದ ಸಾಂಸ್ಕೃತಿಕ ಕೊಡು-ಕೊಳ್ಳುವಿಕೆ ಇತ್ಯಾದಿಗಳು ಸಾಮಾನ್ಯ ಬಳಕೆಯ ಸಸ್ಯಗಳ ಹೆಸರುಗಳಿಗೆ ಕಾರಣವಾದವು. ಈ ಹೆಸರುಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾದವು. ಯುರೋಪಿನ ಆಗಿನ ಸಸ್ಯ ಶಾಸ್ತ್ರಜ್ಞರು ಗಿಡಗಳ ಹೆಸರನ್ನು ಲ್ಯಾಟೀನ್ ಶಬ್ಧಗಳಲ್ಲಿ ಅವುಗಳ ವೈವಿಧ್ಯವನ್ನು ಸೂಚಿಸುವಂತೆ ವೈಜ್ಞಾನಿಕ ಹೆಸರುಗಳಾಗಿ ಬಳಸಿದ್ದರು. 1707-1778ರ ಹೊತ್ತಿಗೆ ಬದುಕ್ಕಿದ್ದ ಕಾರ್ಲ್ ಲಿನ್ನೆಯಸ್ ಗಿಡದ ಹೂವಿನ ಭಾಗವನ್ನು ಗಮನದಲ್ಲಿ ಇಟ್ಟುಕೊಂಡು ಅದನ್ನು ಹೆಸರಿಸುವ ಕ್ರಮವನ್ನು ಪ್ರಾರಂಭಿಸಿದನು. ಲಿನ್ನೆಯಸ್ ಸಸ್ಯ ಶಾಸ್ತ್ರದ ಹೆಸರುಗಳನ್ನು ಹುಟ್ಟು ಹಾಕುವುದರಲ್ಲಿ ಎರಡು ಭಾಗ ಇರುವ ಕ್ರಮವನ್ನು ನಂತರದ ವರ್ಷಗಳಲ್ಲಿ ಉತ್ತೇಜಿಸಿದನು. ಸಸ್ಯದ ಮೊದಲ ಭಾಗ ಸಸ್ಯ ಕುಟುಂಬದ ಮೂಲ ಹೆಸರು; ಎರಡನೇ ಭಾಗ ಗಿಡವನ್ನು ಮೊದಲ ಬಾರಿಗೆ ಗುರುತಿಸಿದ ವಿಜ್ಞಾನಿನ ಹೆಸರಿನ ಭಾಗ. ಈ ಕ್ರಮದಿಂದ ವಿಜ್ಞಾನಿಗೆ ಗೌರವ ಸಲ್ಲುವುದೇ ಅಲ್ಲದೆ ಹಲವು ಗೊಂದಲಗಳಿಗೆ ತೆರೆ ಎಳೆದಂತಾಗುವುದು.

ಶ್ರೇಷ್ಠ ಸಸ್ಯ ವರ್ಗೀಕರಣ ಶಾಸ್ತ್ರಜ್ಞ, ಕಾರ್ಲ್ ಲಿನ್ನೆಯಸ್ ತಾನೇ ಹೇಳಿದಂತೆ ವ್ಯಾನ್ ರೀಡ್‌ರವರ 'ಹೋರ್ತುಸ್ ಮಲಬಾರಿಕುಸ್' ಗ್ರಂಥವನ್ನು ಆಧಾರವಾಗಿ ಇಟ್ಟುಕೊಂಡಿದ್ದ.

ಅದು ನೀಡುವ ಸಮಗ್ರ, ನಿಖರ ಹಾಗೂ ಒಪ್ಪಿಕೊಳ್ಳುವ ರೀತಿಯ ಮಾಹಿತಿಯನ್ನು ಬಹುವಾಗಿ ನಂಬಿದ್ದ. ಆತನು 'ಹೋರ್ತುಸ್ ಮಲಬಾರಿಕುಸ್'ನಿಂದ ಆಯ್ದ ಮಲಯಾಳಿ ಹೆಸರುಗಳನ್ನು ನೇರವಾಗಿ ಲ್ಯಾಟಿನ್ ಉಚ್ಚಾರಣೆಗೆ ಹೊಂದಿಸಿಕೊಂಡು ಮರುನಾಮಕರಣ ಮಾಡಿದ್ದಾನೆ. ಹೀಗೆ 258 ಗಿಡಗಳ ಮಲಯಾಳಿ ಹೆಸರುಗಳನ್ನು ತನ್ನ ಪುಸ್ತಕದಲ್ಲಿ ಅಳವಡಿಸಿಕೊಂಡಿದ್ದಾನೆ. ಅವನು ಉಲ್ಲೇಖಿಸಿರುವ ಭಾರತೀಯ ಗಿಡಗಳ ಪೈಕಿ ಹೆಚ್ಚಿನವು ಮಲಬಾರ್ ಮೂಲದವು. ಅವುಗಳನ್ನು 'ಹೋರ್ತುಸ್ ಮಲಬಾರಿಕುಸ್'ನಿಂದ ತೆಗೆದುಕೊಳ್ಳಲಾಗಿದೆ.

ಹೊಸದಾಗಿ ಕಂಡು ಹಿಡಿದ ಗಿಡಕ್ಕೆ ಶ್ರೇಷ್ಠ ಸಸ್ಯಶಾಸ್ತ್ರಜ್ಞರ ಹೆಸರಿಡುವುದು ಅವರನ್ನು ಗೌರವಿಸಿದಂತೆ ಎಂದು ವಿಜ್ಞಾನಿಗಳು ಭಾವಿಸುತ್ತಾರೆ. ವ್ಯಾನ್ ರೀಡ್ ಉದಾಹರಿಸಿದ ಸುಮಾರು 35 ಗಿಡಗಳಿಗೆ ಅವನ ಹೆಸರನ್ನು ಸೇರಿಸಿ ಲಿನ್ನೆಯಸ್ ನಾಮಕರಣ ಮಾಡಿದ್ದಾನೆ.

## ಧೀಮಂತ ವ್ಯಕ್ತಿತ್ವದ ವ್ಯಾನ್ ರೀಡ್

ವ್ಯಾನ್ ರೀಡ್ 1636ರಲ್ಲಿ ಪ್ರತಿಷ್ಠಿತ ಮತ್ತು ಶ್ರೀಮಂತರ ಮನೆತನದಲ್ಲಿ ಜನಿಸಿದ್ದನು. ಬಾಲ್ಯದಲ್ಲಿಯೇ ಹೆತ್ತವರನ್ನು ಕಳೆದು ಕೊಂಡ. ಇವನಿಗೇನೂ ವಿಜ್ಞಾನದಲ್ಲಿ ಶಿಕ್ಷಣವಿರಲಿಲ್ಲ. ವ್ಯಾನ್ ರೀಡಿಗೆ 14 ವರ್ಷವಿರುವಾಗ ಹುಟ್ಟೂರಾದ ನೆದರ್‌ಲ್ಯಾಂಡ್ಸ್‌ನ್ನು ಬಿಟ್ಟನು. ತನ್ನ 20 ನೇ ವಯಸ್ಸಿನಲ್ಲಿ ಡಚ್ ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಸೈನಿಕನಾಗಿ ಸೇರಿಕೊಂಡನು. ಡಚ್ ಸೇನೆಯಲ್ಲಿ ಇವನ ಉನ್ನತ ಸೇವೆಯಿಂದಾಗಿ ಬೇಗ ಬೇಗನೇ ಬಡ್ತಿಯ ಏಣಿ ಹತ್ತುತ್ತಾ ಮಲಬಾರ್‌ನ ಕಮಾಂಡರ್ ಆದ. ಕೊನೆಗೆ ಪಶ್ಚಿಮ ಪ್ರಾಂತ್ಯದಲ್ಲಿ ಕಮಿಷನರ್ ಜನರಲ್ ಆಗಿ ನೇಮಕಗೊಂಡ. ಸಾಮಾಜಿಕ ಮನೋಭಾವದ ವ್ಯಾನ್ ರೀಡ್ ಮಲಬಾರಿನ ಜನರರೊಂದಿಗೆ ಸಲುಗೆ, ಪ್ರೀತಿಗಳಿಂದ ಒಡಾನಾಡುತ್ತಿದ್ದ. ಇಲ್ಲಿನ ಸಾಮಾಜಿಕ ಸಂಗತಿಗಳಲ್ಲಿ ಆಸಕ್ತಿ ವಹಿಸುತ್ತಿದ್ದ. ಕೇವಲ ಅಧಿಕಾರಿಯಾಗಿರದೆ ಸುತ್ತಮುತ್ತಲಿನ ಪರಿಸರದೊಂದಿಗೆ ಹೊಂದಿಕೊಂಡಿದ್ದ.

ಈತ ತನ್ನ ಪುಸ್ತಕದಲ್ಲಿ ಮಲಬಾರಿನ ನೈಸರ್ಗಿಕ ಸೌಂದರ್ಯವನ್ನು ವಿವರಿಸುತ್ತಾ ಹೇಳುತ್ತಾನೆ. "ಮಲಬಾರಿನ ದಾರಿಯಲ್ಲಿ ದೊಡ್ಡ, ಘನ ಕಾಡುಗಳನ್ನು ನೋಡಿದೆ. ಒಂದೇ ಮರದಲ್ಲಿ 10-12 ಹೂ, ಎಲೆ, ಹಣ್ಣುಗಳನ್ನು ನೋಡುವುದೊಂದು ವಿಸ್ಮಯ. ಈ ರೀತಿಯಲ್ಲಿ ಬೆಳೆದ ಕಾಡಿನಲ್ಲಿ ಎಲ್ಲವು ಕ್ರಮಬದ್ಧವಾಗಿದೆ. ಇಲ್ಲಿ ಯಾವುದು ಒಂದು ಇನ್ನೊಂದಕ್ಕೆ ತೊಂದರೆ ಕೊಡುತ್ತಿಲ್ಲ. ಪ್ರತಿ ಮರದ ಕಾಂಡವು ಅಗಲ, ಇನ್ನೊಂದಕ್ಕೆ ತೀರ ಹತ್ತಿರ. ಮರಗಳು 80 ಅಡ್ಡಿಗಳಷ್ಟು ಎತ್ತರಕ್ಕೆ ಬೆಳೆದು ಗಾಳಿಯಲ್ಲಿ ಕೈಯಾಡಿಸುತ್ತಿವೆ. ಇದು ಕಾಡು ಅನ್ನಿಸದೆ ಒಂದು ಮನೆ ಅನ್ನಿಸುತ್ತದೆ. ನಾನು ನೋಡಿದಂತೆ ಭಾರತದ ಈ ಭಾಗ ಪ್ರಪಂಚದ ಎಲ್ಲಾ ಕಡೆಗಳಿಗಿಂತ ಫಲವತ್ತಾದ ನೆಲ." ಇದರಿಂದ ವ್ಯಾನ್ ರೀಡ್ ಇಲ್ಲಿಯ ಪರಿಸರದಿಂದ ಬಹಳ

ಆಶ್ಚರ್ಯಚಕಿತನಾಗಿದ್ದ ಎಂದು ತಿಳಿಯುತ್ತದೆ. ಮಲಬಾರಿನ ಜನ ಸಾಮಾನ್ಯರೂ ಸಹ ಗಿಡ ಮರಗಳ ವೈದ್ಯಕೀಯ ಉಪಯೋಗಗಳನ್ನು ಬಲ್ಲವರಾಗಿದ್ದು ಅವುಗಳನ್ನು ಪರಿಣಾಮಕಾರಿಯಾಗಿ ಸ್ವ-ಚಿಕಿತ್ಸೆಗಾಗಿ ಬಳಸಿಕೊಳ್ಳುತ್ತಿದ್ದರು ಎಂದು ವ್ಯಾನ್ ರೀಡಿಗೆ ಚೋದ್ಯವೆನಿಸುತ್ತಿತ್ತು. ಇಲ್ಲಿನ ಸಸ್ಯ ವೈವಿಧ್ಯವನ್ನು ಯುರೋಪಿನ ವೈಜ್ಞಾನಿಕರು ತಲೆದೂಗುವ ಮಟ್ಟಕ್ಕೆ ದಾಖಲಿಸಬೇಕೆಂಬ ಹುಳ ವ್ಯಾನ್ ರೀಡಿನ ತಲೆ ಕೊರೆಯುತ್ತಿತ್ತು. ಅವನು ಕಛೇರಿ ಕೆಲಸ ಹಾಗೂ ಪಾಶ್ಚಿಮಾತ್ಯರಿಗೆ ಭಾರತೀಯ ನೈಸರ್ಗಿಕ ವಿಶೇಷಗಳನ್ನು ಪರಿಚಯಿಸುವ ಅದಮ್ಯ ಆಸಕ್ತಿಯ ಮಧ್ಯೆ ಸಿಲುಕಿಕೊಂಡವನಂತೆ ಭಾಸವಾಗುತ್ತದೆ.

ವ್ಯಾನ್ ರೀಡ್ ಕೇರಳದ ಸುಮಾರು 200 ಬುದ್ಧಿವಂತ ವ್ಯಕ್ತಿಗಳನ್ನು ಗಿಡಗಳ ಸಂಗ್ರಹಕ್ಕೆ ನಿಯುಕ್ತಿಗೊಳಿಸಿದ್ದ. ಅವರು ವ್ಯಾನ್ ರೀಡ್ ಹೇಳಿದಂತೆ ಗಿಡಗಳ ಕಾಂಡ ಹೂ, ಹಣ್ಣು, ಬೀಜ ಇತ್ಯಾದಿಗಳನ್ನು ಬೇರೆ ಬೇರೆ ಋತುಗಳಲ್ಲಿ ಗಮನಿಸಿ ತಂದುಕೊಡುತ್ತಿದ್ದರು. ಕಂಪೆನಿಯ ತೋಟದಲ್ಲಿ ಹಲವು ಸಸ್ಯಗಳನ್ನು ಬೆಳೆಸಲಾಯಿತು. ಡಚ್ ಸೇನೆಯ ನಾಲ್ಕು ಸೈನಿಕರನ್ನು ಗಿಡಗಳ ಚಿತ್ರ ಬರೆಯಲು ನೇಮಿಸಲಾಯಿತು. ಈ ಎಲ್ಲಾ ಕೆಲಸಗಳನ್ನು ವ್ಯಾನ್ ರೀಡ್ ಮುತುವರ್ಜಿಯಿಂದ ನೋಡಿಕೊಳ್ಳುತ್ತಿದ್ದನು.

ತನ್ನ ಪುಸ್ತಕದಲ್ಲಿ ಕೇರಳದ ಜನರೊಂದಿಗೆ ತಾನು ಈ ಕೆಲಸದ ಸಮಯದಲ್ಲಿ ಒಡನಾಡಿದ ಅನುಭವಗಳನ್ನು ಹಂಚಿಕೊಂಡಿದ್ದಾನೆ. ಇಲ್ಲಿಯ ಕೊಂಕಣಿ ಬ್ರಾಹ್ಮಣರು ತಾವು ನಂಬಿದ್ದನ್ನು ಚಾಚು ತಪ್ಪದ್ದೇ ಪಾಲಿಸುವ ಶ್ರದ್ಧಾವಂತರು. ಪರದೇಶದವರು ಹೇಳುವ ಸಂಗತಿಗಳಿಗೆ ಅವರದ್ದು ಕೇವಲ ಅಸಡ್ಡೆ. ಅದರೆ ಅವರೊಂದಿಗೆ ಅತಿಯಾದ ಗೌರವದಿಂದ ವ್ಯವಹರಿಸುತ್ತಿದ್ದರು. ಕೆಲಸದಲ್ಲಿ ನಿಷ್ಠೆ ಗಟ್ಟಿತನದ ವ್ಯಕ್ತಿತ್ವ ಎಂದು ಸಂಗಡಿಗರನ್ನು ಪ್ರಶಂಸಿಸಿದ್ದಾನೆ. ತಾನು ಗೌರವಾನ್ವಿತ ಅಧಿಕಾರಿಯಾಗಿದ್ದರೂ, ಇಟ್ಟಿ ಅಚ್ಚುದನ್ ಎಂಬ ಅಸ್ಪೃಶ್ಯ, ಬಡವ ಹಾಗೂ ಅತಿವಿನೀತ ವ್ಯಕ್ತಿಯನ್ನು ಪ್ರೇಮ ಹಾಗೂ ಸಮ್ಮಾನದಿಂದ ನಡೆಸಿಕೊಂಡಿರುವುದು ಅವನ ತಿಳುವಳಿಕೆಗೆ ನೀಡಿದ ಗೌರವ.

'ಹೋರ್ತುಸ್ ಮಲಬಾರಿಕುಸ್' ಗ್ರಂಥ ರಚಿಸುವ ಕೆಲಸ ಸುಗಮವಾಗಿರಲಿಲ್ಲ', ಲೆಕ್ಕವಿಲ್ಲದಷ್ಟು ಕಷ್ಟಗಳು ಎದುರಾದವು. ಮುಖ್ಯ ಸಸ್ಯ ಶಾಸ್ತ್ರಜ್ಞರು, ಡಚ್ ವೈದ್ಯರು, ಹಿತೈಷಿ-ಸ್ನೇಹಿತರು ಹಾಗೂ ಮುದ್ರಕರಲ್ಲಿ ಕೆಲವರು ಅಕಾಲ ಮೃತ್ಯು ಹೊಂದಿದರು. ಹಣಕಾಸಿನ ಅಡಚಣೆ ಬಹಳವಿತ್ತು. ಇಷ್ಟಾದ ಮೇಲೆ ಪುಸ್ತಕಕ್ಕೆ ಶೂನ್ಯ ಬೇಡಿಕೆ. ಇವೆಲ್ಲವು ಕೆಲಸ ನಿರರ್ಥಕವೆನಿಸುವಷ್ಟು ಒತ್ತಡ ತಂದಿದ್ದವು. ವ್ಯಾನ್ ರೀಡ್ ಶಕ್ತಿ, ನಂಬಿಕೆ, ಸ್ಥಾನಮಾನ ಕಷ್ಟ, ಸಹಿಷ್ಣುತೆ, ಸಂಪನ್ಮೂಲತ್ವದಿಂದಾಗಿ ತನ್ನ ಗುರಿ ಸಾಧಿಸುವಲ್ಲಿ ಯಶಸ್ವಿಯಾದ.

ಕೊಚ್ಚಿನ್‌ನ ಗವರ್ನರ್ ಸ್ಥಾನದಿಂದ 1678ರಲ್ಲಿ ವ್ಯಾನ್ ರೀಡ್ ಪದಚ್ಯುತಿಗೊಂಡ. ಸಸ್ಯಗಳ ಸಂಗ್ರಹವನ್ನು ಆಮ್‌ಸ್ಟರ್‌ಡ್ಯಾಮ್‌ಗೆ ರವಾನಿಸಲಾಯಿತು. ಮತ್ತೆ ಬಟೇವಿಯಾಗೆ ಬದಲಾವಣೆ. ಬಳಿಕ ಶ್ರೀಲಂಕಾ. ಪುನಹ ಭಾರತ – ಕಲಕತ್ತಾ, ನಾಗಪಟ್ಟಣಂ. ತೀವ್ರ ಅನಾರೋಗ್ಯ ಪೀಡಿತನಾದ ವ್ಯಾನ್ ರೀಡ್ 1691ರ ಡಿಸೆಂಬರ್ 15ರಂದು ಆಡಳಿತದ ಕೆಲಸಕ್ಕಾಗಿ ಕೊಚ್ಚಿಯಿಂದ ಸೂರತ್‌ಗೆ ಹೋಗುವಾಗ ಹಡಗಿನಲ್ಲಿ ಕಾಲವಶನಾದ. ಸೂರತಿನಲ್ಲಿ ಈ ಮಹಾವ್ಯಕ್ತಿಯ ಸ್ಮಾರಕವಿದ್ದರೂ ಈಗ ಸಂಪೂರ್ಣ ನಿರ್ಲಕ್ಷ್ಯಕ್ಕೆ ಒಳಗಾಗಿದೆ.

**ಭಾಷಾಂತರಗಳು**

ತನ್ನ ಜೀವಮಾನದ ಬಹುಪಾಲನ್ನು (35 ವರ್ಷ) 'ಹೋರ್ತುಸ್ ಮಲಬಾರಿಕುಸ್' ಪುಸ್ತಕದ ಇಂಗ್ಲೀಷ್ ಅವತರಣಿಕೆ ತಯಾರಿಸಿ ಬರೆದು ಪ್ರಕಟಿಸುವಲ್ಲಿ ಕಳೆದ ಕೆ.ಎಸ್. ಮಣಿಲಾಲ್ ಶ್ರದ್ಧಾವಂತ ಸಸ್ಯ ವರ್ಗೀಕರಣ ಶಾಸ್ತ್ರಜ್ಞ. ಅವರು ಹಳೆ ಲ್ಯಾಟೀನ ಭಾಷೆಯ 'ಹೋರ್ತುಸ್ ಮಲಬಾರಿಕುಸ್'ನ್ನು ಇಂಗ್ಲೀಷಿಗೆ ಹಾಗೂ ಮಲಯಾಳಂಗೆ ಭಾಷಾಂತರಿಸಿ ಭಾರತದಲ್ಲಿ ಅಲಕ್ಷಿತ ಸಸ್ಯವರ್ಗೀಕರಣ ಶಾಸ್ತ್ರದಲ್ಲಿಯೇ ಮಾಹಿತಿ ಕ್ರಾಂತಿ ಹುಟ್ಟುಹಾಕಿದವರು.

1815ರಿಂದ ಕೊಡಲಾಗುತ್ತಿರುವ 'ಆಫರ್ ಆಫ್ ದ ಆರ್ಡರ್ ಆಫ್ ಆರೆಂಜ್ ನಸಾವ್' ತಮ್ಮ ಜೀವಮಾನದ ಸೇವೆಗಾಗಿ ಡಚ್ ರಾಣಿಯ ಕೈಯಿಂದ ಇವರು ಪಡೆದುಕೊಂಡಿದ್ದಾರೆ. ಕೆ.ಎಸ್.ಮಣಿಲಾಲರು ಈ ಗೌರವವನ್ನು ಪಡೆದ ಏಷ್ಯಾದ ಏಕೈಕ ವ್ಯಕ್ತಿ. 2003 ರಲ್ಲಿ ಮಣಿಲಾಲರ 'ಹೋರ್ತುಸ್ ಮಲಬಾರಿಕುಸ್'ನ ಇಂಗ್ಲೀಷ್ ಭಾಷಾಂತರವನ್ನು ಕೇರಳ ವಿಶ್ವವಿದ್ಯಾಲಯ ಪ್ರಕಟಣೆಗಾಗಿ ಕೈಗೆತ್ತಿಕೊಂಡಿತ್ತು. ಇದರಿಂದ ಮಣಿಲಾಲರ ಬಹು ನಿರೀಕ್ಷಿತ ಆಸೆ ಕೈಗೂಡುವಂತಾಯಿತು. ಈ ಗ್ರಂಥ ಮೂಲ ಕೃತಿಯಂತೆಯೇ 12 ಸಂಪುಟಗಳಲ್ಲಿ ಮುದ್ರಣಗೊಂಡಿತ್ತು.

2003ರ ಜೂನ್ 12ರಂದು ಆಗಿನ ರಾಷ್ಟ್ರಪತಿಗಳಾದ ಡಾ|| ಎ.ಪಿ.ಜೆ.ಅಬ್ದುಲ್ ಕಲಾಂ ಇದನ್ನು ಲೋಕಾರ್ಪಣೆಗೊಳಿಸಿದರು. ವಿಜ್ಞಾನಿಯೊಬ್ಬನ ಜೀವಮಾನದ ಪ್ರಯತ್ನಕ್ಕೆ ಮತ್ತೊಬ್ಬ ವಿಜ್ಞಾನಿಯಿಂದ ಗೌರವ ಸಿಕ್ಕಂತಾಯಿತು. ಇದೇ ದಿನ 1678ರಲ್ಲಿ ಪ್ರಕಟಿತ ಮೂಲ ಗ್ರಂಥದ 325 ನೇ ವಾರ್ಷಿಕೋತ್ಸವವೂ ಆಗಿತ್ತು.

# ಆಯುರ್ವೇದಕ್ಕೆ ಕೊಂಕಣಿಗರ ಕೊಡುಗೆ

– ಪಯ್ಯನ್ನೂರು ರಮೇಶ್ ಪೈ



ಭಾರತೀಯ ಆರೋಗ್ಯ ವಿಜ್ಞಾನದಲ್ಲಿ ಆಯುರ್ವೇದ ಮುಖ್ಯವಾದದ್ದು. ನಾಲ್ಕು ವೇದಗಳ ಮೇಲೆ ಪಂಚಮವೇದ ಎಂಬ ವಿಶೇಷಣೆ ಹೊಂದಿರುವ ಆಯುರ್ವೇದ ಪುರಾತನ ಕಾಲದಿಂದಲೇ ಇಲ್ಲಿ ಪ್ರಚಾರದಲ್ಲಿದೆ. ಸಂಸ್ಕೃತದಲ್ಲಿ ರಚಿಸಲಾದ ಅನೇಕ ತಾಡಪತ್ರಿಯಲ್ಲಿ ಹಾಗೂ ವಿವಿಧ ಲಿಪಿಯಲ್ಲಿ ಬರೆಯಲಾದ ಅನೇಕ ಗ್ರಂಥಗಳಲ್ಲಿ ಆಯುರ್ವೇದದ ಸಮಗ್ರ ವಿಜ್ಞಾನ ಪಸರಿಕೊಂಡಿದೆ. ಎಷ್ಟು ಶ್ಲೋಕಗಳನ್ನಾದರೂ ಕಂಠಪಾಠ ಮಾಡಿ ನೆನಪಿಟ್ಟು ಯಾವ ಸಂದರ್ಭದಲ್ಲೂ ಸ್ಮರಣೆಯ ಹೊತ್ತುಗೆಯಿಂದ ಹೊರಕ್ಕೆ ತೆಗೆಯುವಂತಹ ಚುರುಕು ಬುದ್ಧಿಯಿದ್ದ ಎಷ್ಟೋ ವೈದ್ಯ ವಿಶಾರದರು ಆಗಿಹೋಗಿದ್ದಾರೆ.

ಗಿಡಮೂಲಿಕೆಗಳಿಂದ ತಯಾರು ಮಾಡಿದ ಪುಡಿಗಳು ಅಥವಾ ಚೂರ್ಣಗಳು, ತೈಲಗಳು, ಕಷಾಯಗಳು – ಇವೆಲ್ಲಾ ಆಯುರ್ವೇದದ ಉಪಕರಣಗಳಾಗಿವೆ. ರಾಸಾಯನಗಳನ್ನು ತಯಾರಿಸುವ ರೀತಿ ಮತ್ತು ಅವುಗಳು ಯಾವ ಯಾವ ಕಾಯಿಲೆಗಳಿಗೆ ಹೇಗೆಲ್ಲಾ ಪ್ರಯೋಜನಪಡಿಸಬಹುದು ಎಂಬುದಕ್ಕೆ ಈ ವಿಜ್ಞಾನಶಾಖೆಯಲ್ಲಿ ಗ್ರಂಥಗಳಿವೆ. ಸಂಪೂರ್ಣವಾಗಿ ಈ ವಿಜ್ಞಾನಶಾಖೆಯು ಮಾನವಮೂಲ್ಯಗಳನ್ನು ಎತ್ತಿ ಹಿಡಿಯುತ್ತಿದೆ.

ಆಯುರ್ವೇದ ವಿದ್ಯೆಯ ಮತ್ತು ರೋಗ ವಿಮೋಚನೆಯ ವಿಷಯದಲ್ಲಿ ಆರಾಧನೆ ಪ್ರಬಲವಾದ ಒಂದು ವಿಶ್ವಾಸವಾಗಿದೆ. ದೇವತೆಗಳ ವೈದ್ಯರೆಂಬ ಶ್ಲಾಘನೆ ಧನ್ವಂತರಿಗೆ ದೊರಕಿದೆ. ದೇವಾಸುರರ ಸಮುದ್ರ ಮಥನದ ವೇಳೆಯಲ್ಲಿ ಅಮೃತಕಲಶ ಸಹಿತ ಧನ್ವಂತರಿ ಪ್ರತ್ಯಕ್ಷರಾದ ದಿನ ಶಕವರ್ಷದ ಕಾರ್ತಿಕ ಮಾಸದ ಕೃಷ್ಣಪಕ್ಷ ತ್ರಯೋದಶಿ ಆಗಿತ್ತು. ಆದುದರಿಂದ ಆ ದಿನ ಧನ್ವಂತರಿ ಜಯಂತಿ ಎಂಬ ವಿಶೇಷ ದಿನವಾಗಿ ಆಚರಿಸಲಾಗುತ್ತಿದೆ. ಗೌಡಸಾರಸ್ವತ ಬ್ರಾಹ್ಮಣರ ಆರಾಧ್ಯ ದೇವತೆಗಳಲ್ಲಿ ಧನ್ವಂತರಿಗೂ ಒಂದು ಸ್ಥಾನವಿದೆ. ಧನ್ವಂತರಿಗಾಗಿ ಹೆಚ್ಚು ದೇವಾಲಯಗಳನ್ನು ರಚಿಸಲಾಗಿದೆ.

ಕೊಚಿಯಲ್ಲಿ ಔಷಧ ಸಸ್ಯಗಳ ಒಂದು ದೊಡ್ಡ ವಾಟಿಕೆ ನಿರ್ಮಿಸಿ ಅಲ್ಲಿ 700 ಕ್ಕೂ ಮಿಕ್ಕಿ ಸಸ್ಯಲತಾದಿಗಳನ್ನು ಬೆಳೆಯಿಸಿ ಅವುಗಳ ನಿರೀಕ್ಷಣೆ – ಪರೀಕ್ಷಣೆ ನಡೆಸುವ ಒಂದು ದೊಡ್ಡ ಯೋಜನೆಯನ್ನು ಡಚ್ ಆಳ್ವಿಕೆಯ ಕಾಲದಲ್ಲಿ 1663 ರಿಂದ 1669ರ ತನಕ ಕೊಚ್ಚಿಯಲ್ಲಿ ಡಚ್ ಕಮಾಂಡರಾಗಿದ್ದ ವ್ಯಾನ್ ರೀಡ್ ಅವರು ಕಾರ್ಯರೂಪಕ್ಕೆ ತಂದರು. ಈ ಕೆಲಸದಲ್ಲಿ ಅವರಿಗೆ ಅಪ್ಪು ಭಟ್, ರಂಗ ಭಟ್ ಮತ್ತು ವಿನಾಯಕ ಪಂಡಿತ್ ಎಂಬೀ ಮೂವರು ಗೌಡ ಸಾರಸ್ವತ ವೈದ್ಯರ ಸಹಾಯ ದೊರಕಿತ್ತು.

ಫೋರ್ಟ್ ಕೊಚ್ಚಿಯ ವೆಳಿ ಮೈದಾನಿಯ ಪಕ್ಕ ಈ ತೋಟವಿತ್ತೆಂಬುದು ಮನೆ ಮಾತಾಗಿದೆ. ವಾಟಿಕೆ ಅಥವಾ ತೋಟ ಎಂಬ ಅರ್ಥವುಳ್ಳ "ಓರ್ತಾ" ಎಂಬ ಲ್ಯಾಟಿನ್ ಶಬ್ದ ಭ್ರಷ್ಟವಾಗಿ "ಒಡಾತ್ತಾ" ಎಂದು ಈಗಲೂ ಕರೆಯಲ್ಪಡುತ್ತಿದೆ. ಕಂಪೆನಿ ಎಂಬುದಕ್ಕೆ ಕುಂಪಂಜಿ ಯಾ ಕುಂಪತ್ರಿ ಎಂದೂ ಕಮಾಂಡರ್ ಎಂಬುದಕ್ಕೆ ಕುಮುದೋರ್ ಎಂದೂ ಹೇಳುತ್ತಿದ್ದರು. ಅಂತೆಯೇ "ಕುಮುದೋರ್ ಒಡಾತ್ತಾ" ಎಂಬ ಇತಿಹಾಸದ ಪ್ರವೇಶದ್ವಾರದ ಅವಶಿಷ್ಟ ಈಗಲೂ ನಮಗೆ ಕಾಣಸಿಗುತ್ತದೆ.

ವ್ಯಾನ್ ರೀಡ್ ಅವರ ನೇತೃತ್ವದಲ್ಲಿ ಒಂದು ತಜ್ಞರ ಮಂಡಳಿ ರಚಿಸಲಾಯಿತು. ಮೂವರು ಕೊಂಕಣಿ ವೈದ್ಯರಲ್ಲದೆ ಇಟ್ಟಿ ಅಚ್ಚುತನ್ ಎಂಬ ಮಲಯಾಳಿ ವೈದ್ಯರೂ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಮಥೇವೂಸ್ ಎಂಬ ಕ್ರೈಸ್ತ ಪುರೋಹಿತರೊಬ್ಬರು ಆಗ ಇದೇ ವಿಷಯದಲ್ಲಿ ಒಂದು ಗ್ರಂಥ ತಯಾರು ಮಾಡುವ ಪ್ರಯತ್ನದಲ್ಲಿದ್ದರು. ಕೊಂಕಣಿ ವೈದ್ಯರ ಸಹಕಾರ ಅವರೂ ಪಡೆದಿದ್ದರು. ಆದರೆ ವ್ಯಾನ್ ರೀಡಿನ ಯೋಜನೆ ಮುಂದುವರಿಯುವಾಗ ಫಾದರ್ ಮಥೇವೂಸ್ ಅವರು ತನ್ನ ಯೋಜನೆಗೆ ವಿರಾಮ ಕೊಟ್ಟರು.

ಮಲಯಾಳಂ ಭಾಷೆಯನ್ನು ವಿದೇಶೀಯರು ಆ ಕಾಲದಲ್ಲಿ ಮಲಬಾರಿ ಎಂದು ಗುರುತಿಸುತ್ತಿದ್ದರು. ಅಂತೆಯೇ ಕೊಂಕಣಿ ಭಾಷೆಯನ್ನೂ ಅವರು "ಲಿಂಗ್ವಾ ಬ್ರಾಹ್ಮಣಾ" ಎಂದು ಕರೆಯುತ್ತಿದ್ದರು. ವ್ಯಾನ್ ರೀಡ್ ಅವರ ತಂಡ ತಯಾರಿಸಿದ ವಿಜ್ಞಾನದ ಗ್ರಂಥ ಬೃಹತ್ತಾಗಿ ಬೆಳೆಯಿತು. ಔಷಧಮೂಲ್ಯವುಳ್ಳ ತರುಲತೆಗಳನ್ನು ತಂದೊಯ್ದು ವಿವಿಧ ಋತುಮಾನದಲ್ಲಿ ಅವು ಹೇಗೆ ಚಿಗುರಿ ಪುಷ್ಪಿಸುತ್ತವೆ ಮುಂತಾದ ಸಂಶೋಧನೆ ನಡೆಯುತ್ತಿತ್ತು. 640 ಕ್ಕೂ ಹೆಚ್ಚಿನ ಸಸ್ಯಗಳನ್ನು ಸೂಕ್ಷ್ಮವಾಗಿ ಚಿತ್ರೀಕರಿಸಲಾಯಿತು. ಒಂದೊಂದು ಗಿಡದ ಬಳ್ಳಿಯ ಹೆಸರು ಮಲಯಾಳಂ (ಮಲಬಾರಿ), ಕೊಂಕಣಿ (ಲಿಂಗ್ವಾ ಬ್ರಾಹ್ಮಣಾ), ಲ್ಯಾಟಿನ್ ಮತ್ತು ಅರಬಿ – ಈ ನಾಲ್ಕು ಭಾಷೆಗಳಲ್ಲಿ ಅವುಗಳ ಚಿತ್ರಗಳೊಂದಿಗೆ ಬರೆದಿಡಲಾಯಿತು.

ಭಾರತದ ಮಲಬಾರ್ ಪ್ರದೇಶದಲ್ಲಿನ ತೋಟವೆಂಬ ಅರ್ಥ ಬರುವ "ಹೋರ್ತೂಸ್ ಇಂಡಿಕೂಸ್ ಮಲಬಾರಿಕುಸ್" ಎಂಬ ಬೃಹತ್ ಗ್ರಂಥವನ್ನು ತಯಾರಿಸಲಾಯಿತು. ಆದರೆ 1677 ರಲ್ಲಿ ಅವರನ್ನು ಜಕಾರ್ತಾಗೆ ವರ್ಗಾವಣೆ ಮಾಡಲಾಯಿತು. ಆಗಲೇ ಗ್ರಂಥ ನಿರ್ಮಾಣದ ಯೋಜನೆ ಸ್ಥಗಿತವಾಯಿತು. ಮತ್ತೆ ಬಂದ ಅಧಿಕಾರಿಗಳು ಔಷಧ ವಾಟಿಕೆಯ ಬಗ್ಗೆ ಗಮನಿಸಿದುದಾಗಿ ದಾಖಲೆಯಿಲ್ಲ.

ಯುರೋಪಿಗೆ ತೆರಳಿದ ವ್ಯಾನ್ ರೀಡಿನ ಡಚ್ ತಂಡದವರಿಗೆ ಈ ಬೃಹತ್ ಪುಸ್ತಕವನ್ನು ಪ್ರಕಟಿಸುವುದಕ್ಕೆ ತೀವ್ರ ಇಚ್ಛೆಯಿತ್ತು. ವ್ಯಾನ್ ರೀಡಿನ ಗೈರು ಹಾಜರಿಯಲ್ಲೇ ಅವರು ಎರಡು ಭಾಗಗಳನ್ನು ಹೊರತಂದರು. ಅಮ್ಸ್ಟರ್ಡಾಮಿನಿಂದ ತಾಮ್ರದ ತಗಡಿನಲ್ಲಿ ಅಕ್ಷರಗಳನ್ನೂ ಚಿತ್ರಗಳನ್ನೂ ಕೆತ್ತನೆ ಮಾಡಿದ ಪುಸ್ತಕದ ಮೊದಲ ಖಂಡ 1678 ರಲ್ಲಿ ಹೊರತಂದರು. ಮತ್ತೆ ಎರಡನೇ ಸಂಪುಟ. ಆದರೆ ಆಗ ಅಲ್ಲಿ ಬಂದುಸೇರಿದ ವ್ಯಾನ್ ರೀಡ್ ಅವರು ತಾನು ಹೇಳಬಯಸಿದ ವಿಷಯವನ್ನು ಮುನ್ನುಡಿಯಾಗಿ ಮೂರನೇ ಭಾಗದಲ್ಲಿ ಸೇರಿಸಿ ಪ್ರಕಟಿಸಿದರು.

ಹೀಗೆ 1693 ಆದಾಗ ಹೋರ್ತೂಸಿನ 12 ಭಾಗಗಳೂ ಹೊರಬಂದುವು. ಇದೀಗ ಗೋವಾ ವಿಶ್ವವಿದ್ಯಾಲಯದಲ್ಲಿ ಇದರ ಕೊಂಕಣಿ ಅನುವಾದ ಕಾರ್ಯ ಮುಂದುವರಿಯುತ್ತಿರುವುದಾಗಿ ತಿಳಿದುಬಂದಿದೆ.

ಅಪ್ಪು ಭಟ್, ರಂಗ ಭಟ್ಟ ಮತ್ತು ವಿನಾಯಕ ಪಂಡಿತ್ ಎಂಬ ಮೂವರು ಕೊಂಕಣಿ ವೈದ್ಯರಿಗಾಗಿ ಕೊಚ್ಚಿಯಲ್ಲಿ ಸ್ಮಾರಕವನ್ನೆತ್ತಲಾಗಿದೆ. ಗೋವಾ ಮುಖ್ಯಮಂತ್ರಿ ಶ್ರೀ ಲಕ್ಷ್ಮೀಕಾಂತ್ ಪಾರ್ಸೇಕಾರರು 2015 ನವೆಂಬರ್ 29 ರಂದು ಅನಾವರಣಗೊಳಿಸಿದ ಈ ಸ್ಮಾರಕವನ್ನು ಅನುಗ್ರಹಾ ಚ್ಯಾರಿಟೇಬಲ್ ಟ್ರಸ್ಟಿನ ನೇತೃತ್ವದಲ್ಲಿ ಕೊಚ್ಚಿ ತಿರುಮಲ ದೇವಸ್ಥಾನದವರು ನೀಡಿದ ಸ್ಥಳದಲ್ಲಿ ಚೆರಳಾಯಿಯ ವೆಂಕಟೇಶ ಸೇವಾ ಸಮಿತಿಯ ಪಕ್ಕದಲ್ಲಿ ನಿರ್ಮಿಸಲಾಗಿದೆ.

ಕೊಚ್ಚಿ ಪ್ರದೇಶದ ಪಳ್ಳಿಪ್ಪುರಂ ಎಂಬ ಗ್ರಾಮದಲ್ಲಿನ "ಕಮ್ಮತ್ತಿ" ಎಂದು ಕರೆಯಲ್ಪಡುವ ವಿಖ್ಯಾತ ವೈದ್ಯರ ಕುಟುಂಬದವರು ದೀರ್ಘಕಾಲದ ಬಾಳನ್ನು ಸಾಗಿದ್ದಾರೆ. ಹದಿನೆಂಟನೇ ಶತಮಾನದಲ್ಲಿ ವೆಂಕಟೇಶ್ ಕಾಮತ್, ಅನಂತರ ಅಪ್ಪುಚ್ಚಿ ಕಾಮತ್ ಹಾಗೂ ಇಪ್ಪತ್ತನೇ ಶತಮಾನದಲ್ಲಿ ರಾಮಚಂದ್ರ ಕಾಮತ್ ಮುಂತಾದ ವಿಖ್ಯಾತ ವೈದ್ಯರು ಈ ಕುಟುಂಬಕ್ಕೆ ಸೇರಿದವರು. ಈ ಕುಟುಂಬದಿಂದ ಒಬ್ಬರು ಸನ್ಯಾಸಿಯಾಗಿದ್ದರು. ಗಿರಿ ಕಾಮತರ ಮಗನಾಗಿ ಹುಟ್ಟಿ ಪೂರ್ವಾಶ್ರಮದಲ್ಲಿ ನರಸಿಂಹನೆಂಬ ಹೆಸರಿದ್ದ ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿಯವರು. ಶ್ರೀ ಕಾಶೀಮಠ ಸಂಸ್ಥಾನದ 17ನೇ ಯತಿವರ್ಯರಾಗಿದ್ದರು ಅವರು. ಮಠಾಧಿಪತಿಯಾಗಿರುವಾಗಲೂ ಅವರು ಜನೋಪಕಾರಕ್ಕಾಗಿ ತಮ್ಮ ವೈದ್ಯಕೀಯ ಶಕ್ತಿಯನ್ನು ಪ್ರಯೋಗ ಮಾಡಿದ್ದಾರೆ. ಅನೇಕರಿಗೆ ಕಾಯಿಲೆಗಳಿಂದ ಮುಕ್ತಿ ಕೊಟ್ಟ ಸ್ವಾಮೀಜಿಯವರು ಕೆಲವು ಹತಭಾಗ್ಯರಿಗೆ ಸಂತಾನ ಭಾಗ್ಯ ಮಂತ್ರಪಿಂಡವನ್ನು ಕೊಟ್ಟಿರುವುದಾಗಿ ದಾಖಲೆಗಳಿವೆ.

ಶ್ರೀಮದ್ ಭುವನೇಂದ್ರತೀರ್ಥ ಸ್ವಾಮೀಜಿಯವರ ಪ್ರೇರಣೆಯಿಂದ ದಕ್ಷಿಣ ಕನ್ನಡ ಪ್ರದೇಶದಲ್ಲಿ ಪಾಂಗಾಳ ನಾಯಕರ ಕುಟುಂಬದವರು ಆಯುರ್ವೇದದ ಪ್ರಚಾರಕ್ಕಾಗಿ ದುಡಿದರು. ಉಡುಪಿಯ ಸಮೀಪದ ಕಟಪಾಡಿಯಲ್ಲಿ ವಿಖ್ಯಾತವಾದ ನಾಯಕ ಮನೆತನದಿಂದ ಹಲವಾರು ಆಯುರ್ವೇದ ಪಂಡಿತರು ಆಗಿಹೋಗಿದ್ದಾರೆ. ಇವರಲ್ಲಿ ಪಿ. ಲಕ್ಷ್ಮೀನಾರಾಯಣ ನಾಯಕರು ವಿಖ್ಯಾತರಿದ್ದರು. ಅವರ ನಂತರದ ತಲೆಮಾರಿನವರು ಮುಂದುವರಿಯುತ್ತಿರುವ "ನಾಯಕ ಆಯುರ್ವೇದಾಶ್ರಮ"ದಿಂದ ಜನರ ಆರೋಗ್ಯ ವಿಷಯದಲ್ಲಿ ಸಮಾಧಾನ ನೀಡುವ ಔಷಧಿಗಳನ್ನು ತಯಾರಿಸಲಾಗುತ್ತಿದೆ. ನಾಯಕ ಕುಟುಂಬದವರು ಕೊಂಕಣಿ ಭಾಷೆಯ ಅಭಿಮಾನಿಗಳೂ ಹೌದು.

ಔಷಧಗಳನ್ನು ತುಂಬಿದ ಒಂದು ಪೆಟ್ಟಿಗೆಯನ್ನು ಶ್ರೀಮದ್ ಭುವನೇಂದ್ರತೀರ್ಥ ಸ್ವಾಮೀಜಿಯವರು ಮಂಜೇಶ್ವರದ ಕೊಗ್ಗಭಟ್ಟರಿಗೆ ಕೊಟ್ಟಿದ್ದರು. ವೈದ್ಯಶಾಲೆಯನ್ನು ತೆರೆದು ಜೀವನ ಮುಂದುವರಿಸಿ, ಮಂಗಲವಾಗುತ್ತದೆ ಎಂದು ಸ್ವಾಮೀಜಿಯವರು ಶುಭಾಶೀರ್ವಾದ ಕೋರಿದ ಪ್ರಕಾರ ಅವರು "ಶ್ರೀ ರಾಮಚಂದ್ರ ವೈದ್ಯಶಾಲೆ"ಯನ್ನು ಸ್ಥಾಪಿಸಿದರು. ಇಂದಿಗೂ ಅವರ ಕುಟುಂಬದ ಹೊಸ ತಲೆಮಾರಿನ ಡಾ। ಉಮೇಶ್ ಭಟ್ ವಿದ್ಯಾರ್ಹತೆಯನ್ನು

ಪಡೆದುಕೊಂಡು ಆಯುರ್ವೇದ ವಿಜ್ಞಾನದ ಸದುಪಯೋಗದಿಂದ ಜನರ ಸೇವೆ ಸಲ್ಲಿಸುತ್ತಿದ್ದಾರೆ.

14ನೇ ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಳನ ಮಂಜೇಶ್ವರದಲ್ಲಿ 1945 ಜನವರಿ 4, 5 ತಾರೀಕುಗಳಂದು ಜರಗಿತ್ತು. ಚಿಕ್ಕಮಗಳೂರು, ಕುಮಟಾ, ಸಕಲೇಶಪುರ, ಮೈಸೂರು ಇತ್ಯಾದಿ ದೂರ ಸ್ಥಳಗಳಿಂದ ಅನೇಕ ವೈದ್ಯರು ಪ್ರತಿನಿಧಿಯಾಗಿ ಬಂದು ಭಾಗವಹಿಸಿದ್ದರು. ಇಂತಹ ಸಮ್ಮೇಳನವನ್ನು ಸ್ವಾತಂತ್ರ್ಯಪೂರ್ವ ಕಾಲದಲ್ಲಿನ ಮಂಜೇಶ್ವರದಲ್ಲಿ ಆಯೋಜನೆ ಮಾಡಿದ್ದು ಖಂಡಿತ ಅಲ್ಲಿನ ಶ್ರೀಮದನಂತೇಶ್ವರ ದೇವಸ್ಥಾನದ ಹಾಗೂ ಸಾರಸ್ವತ ಸಮಾಜದ ಸಹಕಾರದಿಂದಲೇ ಎಂಬುದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ. "ಭಕ್ತರ ಮಠ"ದ ವಠಾರದಲ್ಲಿ ಅಲಂಕರಿಸಿದ ಸಭಾಂಗಣದಲ್ಲಿ ಆ ಸಮ್ಮೇಳನ ನಡೆದಿತ್ತು ಎಂಬುದಾಗಿ ಅಂದಿನ "ಸಾರಸ್ವತ" ಪತ್ರಿಕೆಯಿಂದ ತಿಳಿದು ಬರುತ್ತದೆ.

ಮಂಗಳೂರು ರಥಬೀದಿಯಲ್ಲಿ ಗಣಪಯ್ಯನವರ ಆಯುರ್ವೇದ ಕೇಂದ್ರ ಸುಮಾರು ನೂರು ವರ್ಷಕಾಲದಿಂದ ಹೆಸರು ಗಳಿಸಿದೆ. ಅವರೇ ತಯಾರಿಸಿದ ಔಷಧಗಳನ್ನು ಸೇವಿಸಿ ನೂರಾರು ಜನರು ಗುಣಮುಖರಾಗಿದ್ದಾರೆ.

ಮಂಗಳೂರಿನಲ್ಲೇ ಮಠದಕಣಿಯಲ್ಲಿ ಜಗದೀಶ್ ಪ್ರಭುಗಳ ಪುತ್ರ ಡಾ। ಪ್ರಭುಗಳು ನಡೆಸುತ್ತಿರುವ ಸರೋಜಾ ಸೂಪರ್ ಸ್ಪೆಶಾಲಿಟಿ ಆಸ್ಪತ್ರೆಯಲ್ಲಿ ಆಯುರ್ವೇದ ಚಿಕಿತ್ಸಾವ್ಯವಸ್ಥೆಯೇ ಮುಖ್ಯವಾಗಿದೆ.

ಗೋವೆಯ ಪೋಂಡಾದಲ್ಲಿ ಪ್ರಮುಖವಾದ ರಸ್ತೆಯೊಂದರ ನಡುವೆ "ದಾದಾ ವೈದ್ಯ"ರ ಒಂದು ಪ್ರತಿಮೆಯನ್ನು ಕಾಣಬಹುದು. 1859ರಲ್ಲಿ ಕೇರಿಯಲ್ಲಿ ಜನಿಸಿದ ರಾಮಚಂದ್ರ ಪಾಂಡುರಂಗ ವೈದ್ಯ ಎಂಬವರು ಆಯುರ್ವೇದದಲ್ಲಿ ಪ್ರವೀಣರಾಗಿದ್ದರು. ಪೋರ್ಚುಗೀಸ್ ಮೇಲಧಿಕಾರಿಯ ಕುಟುಂಬ ಸದಸ್ಯರ ಚಿಕಿತ್ಸೆಗಾಗಿ ಅವರನ್ನು ಕರೆದೊಯ್ಯುತ್ತಿದ್ದರು. 1947 ರಲ್ಲಿ ಅವರು ದಿವಂಗತರಾದರು. "ಪ್ರಾಣಾಚಾರ್ಯ" ಹಾಗೂ "ದಾದಾ ವೈದ್ಯ" ಎಂದು ಅವರನ್ನು ಜನರು ಗೌರವದಿಂದ ಕರೆಯುತ್ತಿದ್ದರು. ಪೋರ್ಚುಗೀಸ್ ಸರಕಾರದಿಂದ ನಿರ್ಮಿತವಾದ ಅವರ ಪ್ರತಿಮೆ ಪೋಂಡಾದಲ್ಲಿ ಸ್ಥಾಪಿತವಾಗಿದೆ. ಅಲ್ಲದೆ ಪಣಜಿಯ ಒಂದು ರಸ್ತೆಗೆ ಅವರ ಹೆಸರನ್ನಿಡಲಾಗಿದೆ.

ಹಾಗೆಯೇ ಕೊಚ್ಚಿಯಲ್ಲಿ ಡಾ। ಜೆ. ಎ. ಭಟ್ ಇವರು ಸುಧೀಂದ್ರ ತೀರ್ಥ ಸ್ವಾಮೀಜಿಯವರ ಪ್ರೋತ್ಸಾಹಕ್ಕೆ ಪಾತ್ರರಾದ ಆಯುರ್ವೇದ ವೈದ್ಯರಾಗಿದ್ದರು. ಎಡವನಕ್ಕಾಡ್ ಎಂಬಲ್ಲಿನ "ವೇಂಬ್ರಕಾಟ್" ಪ್ರಭುಗಳ ಕುಟುಂಬದಲ್ಲಿ ಹಲವಾರು ವೈದ್ಯರಿದ್ದರು. ಕೊಚ್ಚಿಯ ರಾಜಧಾನಿ ತ್ರಿಪ್ಪೂಣಿತ್ತುರಾದಿಂದ ಅವರನ್ನು ಚಿಕಿತ್ಸೆಗಾಗಿ ಕರೆದೊಯ್ಯುತ್ತಿದ್ದರು. ಈ ಕುಟುಂಬದ ಹಿರಿಯರು ನಿರ್ಮಿಸಿದ ಧನ್ವಂತರಿಯ ಒಂದು ದೇವಸ್ಥಾನ ಕೊಚ್ಚಿಯ ಪಳ್ಳುರುತ್ತಿಯಲ್ಲಿದೆ.

ಕೊಚ್ಚಿಯ ರಾಜ ಶಕ್ತನ್ ತಂಬುರಾನರ ಕಾಲಘಟ್ಟದಲ್ಲಿ ಶ್ರೀ ಕಾಶೀಮಠದಲ್ಲಿ ರಾಜೇಂದ್ರ ತೀರ್ಥ ಸ್ವಾಮೀಜಿಯವರು ಮಠಾಧಿಪತಿಯಾಗಿದ್ದರು. ಪರಂಪರೆಯ 11ನೇಯ ಪೀಠಾಧಿಪತಿಯಾಗಿದ್ದ ಇವರು ಆಯುರ್ವೇದದಲ್ಲಿ ಪಾರಂಗತರಾಗಿದ್ದರು. "ಶರೀರ ವಿನಿಶ್ಚಯ"

ಎಂಬ ಶೀರ್ಷಿಕೆಯಲ್ಲಿ ಸ್ವಾಮೀಜಿಯವರು ಒಂದು ಆಯುರ್ವೇದ ಪುಸ್ತಕವನ್ನೇ ಸಂಸ್ಕೃತದಲ್ಲಿ ಬರೆದಿದ್ದಾರೆ.

ಆಲೆಪ್ಪಿಯಲ್ಲಿ ಮಾಧವ ನಾಯಕರ ನೇತೃತ್ವದಲ್ಲಿ ಅನೇಕ ವರ್ಷಗಳ ಕಾಲ ಒಂದು ಆಯುರ್ವೇದ ಚಿಕಿತ್ಸಾ ಕೇಂದ್ರ ನಡೆಯುತ್ತಿತ್ತು. ಅವರ "ನಾಯಕ್ಸ್ ಲ್ಯಾಬರೇಟರಿ" ಅನೇಕರಿಗೆ ಆಶ್ವಾಸ ನೀಡುವ ಆಶ್ರಯ ಕೇಂದ್ರವಾಗಿತ್ತು. ನಾಯಕರು ತಯಾರಿಸಿದ "ಜಾಂಬುಳ" ಮಧುಮೇಹಕ್ಕೆ ಉತ್ತಮ ಔಷಧವಾಗಿತ್ತು.

ಆಲೆಪ್ಪಿಯ ಸಮೀಪದ ಚೇರ್ತಲೆಯಲ್ಲಿ "ಶೆಣಾಯಿ ವೈದ್ಯನ್" ಎಂಬ ಖ್ಯಾತರಾದ ಆಯುರ್ವೇದ ತಜ್ಞರಿದ್ದರು. ವೆಂಕಟೇಶ್ವರ ಶೆಣಾಯಿ ಎಂಬ ಅವರ ನೈಪುಣ್ಯವೂ ಕೈಪುಣ್ಯವೂ ಹಲವಾರು ಮಂದಿಗೆ ಸಮಾಧಾನ ನೀಡುತ್ತಿತ್ತು. ಅವರ ಸ್ಮಾರಕವಾಗಿ ಈಗ ಅವರ ಮೊಮ್ಮಗ ಡಾ। ರಾಜೀವ್ ಶೆಣಾಯಿ ತನ್ನ ಮಗಳ ಸಮೇತವಾಗಿ "ಶೆಣಾಯಿ ವೈದ್ಯನ್ ಮೆಮೋರಿಯಲ್ ಆಸ್ಪತ್ರೆ" ನಡೆಸುತ್ತಿದ್ದಾರೆ.

ತಿರುವಿದಾಂಕೂರ್ ಮಹಾರಾಜರು ತಮ್ಮ ಆಯುಧಗಳ ಖರ್ಚಿಗಾಗಿ ಖಜಾನೆಯಲ್ಲಿ ಬರಗಾಲ ಬಂದಾಗ ಚೇರ್ತಲೆಯ ಸಮೀಪದ ಕುಂಡೆಲಾಟ್ಟು ಮಲ್ಯರ ಕುಟುಂಬದಿಂದ ಸಾವಿರಾರು ರೂಪಾಯಿಗಳ ಸಾಲ ಪಡಕೊಂಡು ಪ್ರೋನೋಟು ಬರೆದು ಕೊಟ್ಟದ್ದಾಗಿ ದಾಖಲೆಯಿದೆ. ಈ ಕುಂಡೇಲಾಟ್ಟ್ ಮಲ್ಯರ ಕುಟುಂಬದ ಹಿರಿಯರು ಪಾರಂಪರ್ಯವಾಗಿ ಆಯುರ್ವೇದ ವಿದ್ಯೆಯಲ್ಲಿ ನಿಪುಣರೂ ವೈದ್ಯವೃತ್ತಿಯಲ್ಲಿ ವಿಖ್ಯಾತರೂ ಆಗಿದ್ದರು. ರಾಮಚಂದ್ರ ಮಲ್ಯರ ಹೆಸರು ರಾಜಧಾನಿಯಲ್ಲಿ ದಾಖಲಿಸಲಾಗಿತ್ತು.

ಹೋರ್ತೂಸ್ ಮಲಬಾರಿಕಸ್‌ನಲ್ಲಿ ಹೇಳಿದ ಸರ್ವ ಗಿಡಮೂಲಿಕೆಗಳನ್ನು ಸಂಗ್ರಹಿಸಬೇಕೆಂಬ ಛಲದಿಂದ ಬ್ಯಾಂಕ್ ಉದ್ಯೋಗವನ್ನು ತ್ಯಜಿಸಿದ ಎಂ. ವಿ. ಪುರುಷೋತ್ತಮ ಕಾಮತರು ಕೊಚ್ಚಿ ಕಾರಣಕೋಡಂನಲ್ಲಿ ಒಂದು ನಕ್ಷತ್ರವನಕ್ಕೆ ರೂಪಕೊಟ್ಟಿದ್ದಾರೆ. ಮುನ್ನೂರಕ್ಕೂ ಹೆಚ್ಚು ಸಂಖ್ಯೆಯ ಸಸ್ಯನಮೂನೆಗಳನ್ನು ಅವರ ಸಂಗ್ರಹದಲ್ಲಿ ಕಾಣಬಹುದು. ಕೇರಳ ಸರಕಾರದಿಂದ ಕಳೆದ ವರ್ಷ ಅವರಿಗೆ ಒಂದು ಲಕ್ಷರೂಪಾಯಿಯ "ವೃಕ್ಷಮಿತ್ರಂ" ಪುರಸ್ಕಾರವನ್ನು ನೀಡಿ ಗೌರವಿಸಲಾಗಿದೆ.

2014ರಲ್ಲಿ ಕೋಟೇಶ್ವರದಲ್ಲಿ ಶ್ರೀ ಭುವನೇಂದ್ರ ಪಂಚಕರ್ಮ ಚಿಕಿತ್ಸಾಲಯ ಪ್ರಾರಂಭಗೊಂಡಿದೆ. ಅಲ್ಲೇ ಶ್ರೀಯಾದವೇಂದ್ರ ಆಯುರ್ವೇದ ವೈದ್ಯಶಾಲೆಯೂ ಕಾರ್ಯನಿರತವಾಗಿದೆ. ಮಲೆನಾಡಿನ ಭಾಗಮಂಡಲದಲ್ಲಿ "ಶ್ರೀ ಭುವನೇಂದ್ರ ಆಯುರ್ವೇದಿಕ್ ವೃಕ್ಷವಾಟಿಕೆ"ಯ ಉದ್ಘಾಟನೆ ಇದೇ ಬರುವ ನವೆಂಬರ್ 6ಕ್ಕೆ ನಡೆಯಲಿದ್ದು ಶ್ರೀ ಭುವನೇಂದ್ರತೀರ್ಥ ಸ್ವಾಮೀಜಿಯವರ ಒಂದು ಪ್ರತಿಮೆಯ ಸ್ಥಾಪನೆಯೂ ಅಲ್ಲಿ ಜರಗಲಿದೆ.

# ಮೂವರು ಕೊಂಕಣಿ ಬ್ರಾಹ್ಮಣ ವೈದ್ಯರು :

ಚಿತ್ರಭಾವನೆ – ಎನ್. ಬಾಲಕೃಷ್ಣ ಮಲ್ಯ



Ranga Bhat Vinayak Pandit Aapu Bhat

## ಕೊಂಕಣಿ ಭಾಷೆಯಲ್ಲಿ ದೇವನಾಗರಿ ಲಿಪಿಯಲ್ಲಿ ಬರೆದ ಪ್ರಮಾಣ ಪತ್ರ :

स्वास्तिश्री शालिवाहन शाक १५९७ राक्षस संवत्सर चैत्र सु॥ १० के।
श्री राज पाटणी वेसिके रगभट्ट तथा विनायकपंडित आप्पुभट्ट तगवद्य
तानिं कोचिचा कुमदोर आद्रिकि फाद्रे त्या वानिरोपान ह्या मलबार देशा
वु आनिले ओषधमात्र वृक्षावालि झाड रुखं ओळखते त्या मनुष्यांकनु
सारादेसतु ते ते गावातु पेट्टवून तिंतिं वोरवद आणवून त्यात्या झाडां नफुल
फूलपानचीज समस्त त्यात्यातु तुंकाळा वरिस पाट्टन तितीनि तारिली त्या रूप
रात आनि आमगेल्या वैद्यग्रंथानानि छीटाचमागीं त्यात्या औषधाचं गुण
वाअतु नवा नवा जोगुण आमकां कळलेंतावा त्या आरवदांची नावपत्रं उत्
आजिदानि वर्ष सकार्निस्याज आमि लागिरावूनु दालिकु सपाट्टन दिल्या तेन
दिक अजिद्याणुचा कनज अजिद्याणु आमि आमची तिसाणि कर्णु दिली
न सत्यकणु मातु वेजाइ दसणु नागरबसपा नट बसवूनु दिली श्री

[illegible] [illegible] आप्पु वै आप

# ಚಿತ್ರಶಾಲೆ

01. ಅಮ್ಸ್ಟರ್ಡಾಮಿನಲ್ಲಿ ಮುದ್ರಿತವಾದ ಹೋರ್ತುಸ್ ಮಲಬಾರಿಕುಸ್ ಗ್ರಂಥದ 12 ಸಂಪುಟಗಳನ್ನು ತಿರುವನಂತಪುರದ ಅವಿಟ್ಟಮ್ ತಿರುನಾಳ್ ಗ್ರಂಥಾಲಯದಲ್ಲಿ ಸಂರಕ್ಷಿಸಲಾಗಿದೆ.

02. ಗಾರ್ಸಿಯಾ ದ ಓರ್ತಾ ಎಂಬ ಪೋರ್ಚುಗೀಸ್ ಸಸ್ಯ ವಿಜ್ಞಾನಿಯ ಪ್ರತಿಮೆಯನ್ನು ಲಿಸ್‌ಬನಿನಲ್ಲಿ ಸ್ಥಾಪಿಸಿದ್ದಾರೆ.

03. 1678ರಲ್ಲಿ ಮುದ್ರಿತವಾದ ಹೋರ್ತುಸಿನ ಪ್ರಥಮ ಸಂಪುಟದ ಮುಖಚಿತ್ರ.

04. ಗೋವೆಯ ಪೋಂಡಾದಲ್ಲಿ ಪೋರ್ಚುಗೀಸ್ ಸರಕಾರದವತಿಯಿಂದ ಸ್ಥಾಪಿಸಲ್ಪಟ್ಟ ದಾದಾ ವೈದ್ಯರ ಪ್ರತಿಮೆ.

05. ಪಣಜಿಯಲ್ಲಿ ಗಾರ್ಸಿಯಾ ದ ಓರ್ತಾಸ್ಮಾರಕ – ನಗರಸಭೆಯ ಉದ್ಯಾನ

06. ಫೋರ್ಟ್ ಕೊಚ್ಚಿಯಲ್ಲಿನ ಆಯುರ್ವೇದ ವೃಕ್ಷ ವಾಟಿಕೆಯ ಇಂದಿನ ಅವಶಿಷ್ಟ ಪ್ರವೇಶದ್ವಾರ – ಕುಮುದೋರ್ ಒಡಾತ್ತಾ.

07. ಹೆಂಡ್ರಿಕ್ ವ್ಯಾನ್ ರೀಡ್ – ಆರ್ಟಿಸ್ಟ್ ದಿನೇಶ್ ಶೆಣೈಯವರಿಂದ ಚಿತ್ರ.

08. ಹೋರ್ತುಸ್ ಮಲಬಾರಿಕುಸ್ ಗ್ರಂಥರಚನೆಗಾಗಿ ಆಗಾಗ ಚರ್ಚೆನಡೆಸಲಾದ ಕಮಾಂಡರನ ಅತಿಥಿ ಗೃಹ – ಡೇವಿಡ್ ಹಾಲ್– ಫೋರ್ಟ್ ಕೊಚ್ಚಿಯಲ್ಲಿ ಸಂದರ್ಶಿಸಬಹುದು.

09. ಕೇರಳ ವಿಶ್ವವಿದ್ಯಾಲಯದವರು ಪ್ರಕಟಿಸಿದ ಅನುವಾದಿತ ಹೋರ್ತುಸ್ ಮಲಬಾರಿಕುಸ್‌ನ ಸುಂದರ ವರ್ಣ ಮುಖಚಿತ್ರ.

10. ಎರಣಾಕುಳಮಿನಲ್ಲಿರುವ ಕೇರಳ ಇತಿಹಾಸದ ವಸ್ತುಸಂಗ್ರಹಾಲಯದಲ್ಲಿ ವ್ಯಾನ್ ರೀಡ್ ಮತ್ತು ಇಟ್ಟಿ ಅಚ್ಚುತನ್‌ರೊಳಗೆ ಮಾತುಕತೆ ನಡೆಸುವ ನಿಶ್ಚಲದೃಶ್ಯ.

11. ಹೋರ್ತುಸ್ ಮಲಬಾರಿಕುಸ್‌ನಲ್ಲಿ ತೆಂಗಿನ ಮರದ ಸುಂದರ ಚಿತ್ರಣ.

## Sources of Classical literature on plants

| S. No. | Text name | Chronology | Author | Region | Plant Ref. No. |
|---|---|---|---|---|---|
| 1. | Caraka Samhita | 1500 BC – 400 AD | Agnivesa Caraka Drdhabla | Himalaya Kashmir | 12850 |
| 2. | Susruta Samhita | 1500 BC – 500 AD | Susruta Nagarjuna | Kasi Sindhudesa | 9650 |
| 3. | Astanga Sangraha | 500 AD | Vagbhata | Sindhudesa | 20500 |
| 4. | Astanga Hrdayam | 600 AD | Vagbhata | Sindhudesa | 9900 |
| 5. | Astanga Nighantu | 800 AD | Vagbhata | | 2100 |
| 6. | Paryayaratnamala | 900 AD | Madhava | Silahrda | 1900 |
| 7. | Dhanvantari Nighantu | 200 AD – 1000 AD | Unknown | Unknown | 3250 |
| 8. | Cakradatta | 1075 AD | Cakrapanidatta | Vanga desa | 12300 |
| 9. | Dravyaguna Sangraha | 1075 AD | Cakrapanidatta | Vangadesa | 320 |
| 10. | Madhavadravyaguna | 1250 AD | Madhava | Unknown | 750 |
| 11. | Sarngadhara Samhita | 1300 AD | Sarngadhara | Devagiri | 4200 |
| 12. | Nighantu Sesa | 1200 AD | Hemachandra | Unknown | 2950 |
| 13. | Siddamantra | 1210 AD – 1247 AD | Kesava | Unknown | 950 |
| 14. | Hrdayadipaka Nighantu | 1260 AD – 1271 AD | Bopadeva | Unknown | 820 |
| 15. | Madanapala Nighantu | 1374 AD | Madanapala | Kashthanagara | 3000 |
| 16. | Bhavaprakasa | 1550 AD | Bhavamisra | Kasi Kanyakubja | 11200 |
| 17. | Bhavaprakasa Nighantu | 1550 AD | Bhavamisra | Kasi Kanyakubja | 2600 |
| 18. | Raja Nighantu | 1700 AD | Naraharipanda | Kasmira | 7300 |
| 19. | Saligrama Nighantu | 1896 AD | Saligramvaisya | Muradabad | 4200 |
| 20. | Siddhabhesajamanimala | 1896 AD | Krshnaramabhatta | Jayapura | 620 |

## ಹೋರ್ತೂಸ್ ಮಲಬಾರಿಕುಸ್‌ನಲ್ಲಿ ಸಸ್ಯಗಳ ಹೆಸರನ್ನು ಆಯಾ ಚಿತ್ರಗಳೊಂದಿಗೆ ಹೀಗೆ ವಿವಿಧ ಭಾಷೆಗಳಲ್ಲಿ ಬರೆಯಲಾಗಿದೆ

| | |
|---|---|
| *Schakeri-ſchora* lat.<br>[illegible] mal.<br>[illegible] arab<br>[illegible] bra. | *Cumbulám* lat.<br>[illegible] mal.<br>[illegible] arab.<br>[illegible] bram. |
| ಸಂಪುಟ 8, ಚಿತ್ರ 2 | ಸಂಪುಟ 8, ಚಿತ್ರ 3 |
| *Mallen-belleri* lat.<br>[illegible] mal.<br>*Taua-fini*<br>[illegible] bra.<br>[illegible] arab | *Picinna* lat.<br>[illegible] mal.<br>[illegible] arab.<br>[illegible] bram |
| ಸಂಪುಟ 8, ಚಿತ್ರ 6 | ಸಂಪುಟ 8, ಚಿತ್ರ 7 |
| *Maü.* lat.<br>[illegible] mal.<br>*Ambò*<br>[illegible] bram.<br>[illegible] Arab. | *Ansjeli.* lat.<br>[illegible] mal.<br>*Pala-ponoſsii*<br>[illegible] bram.<br>[illegible] Arab. |
| ಸಂಪುಟ 4, ಚಿತ್ರ 1 | ಸಂಪುಟ 3, ಚಿತ್ರ 32 |

## ಹೋರ್ತುಸ್ ಮಲಬಾರಿಕುಸಿನಲ್ಲಿನ ಔಷಧೀಯ ಸಸ್ಯಗಳು ಮಲಬಾರಿನ ಈ ಪ್ರದೇಶಗಳಿಂದ ಸಂಗ್ರಹಿಸಲಾಯಿತು :

| | ಹಳೆಯ ಹೆಸರು | ಹೊಸ ಹೆಸರು |
|---|---|---|
| 1 | Ambalakatti | Ambalakkadu |
| 2 | Angecaimal/Ansjecaimal/Kaimal | Ernakulam |
| 3 | Aregatti | Aragattu |
| 4 | Aroe | Aroor |
| 5 | Aroer | Aroor |
| 6 | Arregatti/Aregatti | Arengatte/ Arengattu |
| 7 | Atingen | Attingal |
| 8 | Atsjencoil/Atsjencoyl | Achankovil |
| 9 | Baykom | Vaikom |
| 10 | Bellanga/Bellange/Bellango | Vellangallur |
| 11 | Benduruti | Willingdon Island |
| 12 | Betimene | Vattamana |
| 13 | Betsjour | Vechoor |
| 14 | Beypin/Baypyn | Vypeen Island |
| 15 | Calicolang/Calgolano/Calicolan/ Kalicolan/Calicolangen | Kayamkulam |
| 16 | Calicut/Calecut | Kozhikode |
| 17 | Candanata/Kendenato/ Candanate/Candenate | Kandanaadu |
| 18 | Canjoer | Kannur |
| 19 | Castello | An island north of Aroor |
| 20 | Catouer/Catour | Kattoor |
| 21 | Chenotti/Chanotti | Chendamangalam |
| 22 | China | China |
| 23 | Cochin | Kochi |
| 24 | Coila/Coylen | Kollam |
| 25 | Corremaloer | Kudamaloor |
| 26 | Cota | Kota |

| | | |
|---|---|---|
| 27 | Cottate/Cotate | Kottayam |
| 28 | Couroer/Couroernade | Curoornaadu |
| 29 | Cranganore | Kodungallur |
| 30 | Elle de soroan | Elayidath Swaroopam |
| 31 | Goendra | Kundara |
| 32 | Jaffanapatnam | Jaffna |
| 33 | Mangetti/Mangatti/Mangotti | Alangadu |
| 34 | Manilhas | Philippines |
| 35 | Mayyazhi | Mahe |
| 36 | Mondabelle | Mundamveli |
| 37 | Moutan/Mouta | Muttam |
| 38 | Oedempere | Udayamperoor |
| 39 | Palacattasjiri | Palakkattucherry |
| 40 | Paloerti/Palourti/Paelurti | Palluruthy |
| 41 | Pananie/Panpani | Ponnani |
| 42 | Paniture/Tirpoutare | Tripunithura |
| 43 | Paracaro/Paracavo/Parakaroo | Paracaroo |
| 44 | Parou/Paroe | North Parur |
| 45 | Perquencour/Berkencour | Vadakkumkoor |
| 46 | Poiga | Poyya |
| 47 | Porca/Porka | Purakkad |
| 48 | Repolin/Rapolyn/Repolyn | Edapalli |
| 49 | Teckencour | Thekkumkoor |
| 50 | Tirsjour/Tirthour | Thrissur |
| 51 | Trevancoor | Travancore |
| 52 | Tuevantoor | Tiruvananthapuram |
| 53 | Warapoli/Warapouli | Varapuzha |
| 54 | Zeylan/Zeilonieae/Zeilan | Sri Lanka |



**SHRIMAD SUDHINDRA THIRTH SWAMI**

SHREE KASHI MATH SAMSTHAN, VARANASI

श्री काशी मठ
दहिसर मुंबई-६८.

Ref No　　　　　　　　　　Date २४-८-२०११

Blessing to our beloved Disciple श्री शरत्चन्द्र शेणै
गोकुल-कोच्ची-६.　　　　of

with meditations of Lord Shree Narayana

With prayers to Shree Vyasa Ragupathi for the welfare and prosperity of all of you, we send you our blessings along with Srigandha Prasadakshatam

पत्र वाचले-अर्थु समजलो-
पण-ईश भट्ट-विनायक पाण्डित आनि
आपु भट हे तेगजनांक स्मारक को-
चें योग्य-पण ते काम मुद्दाम्
देकुन तें स्मारक काइशी जाउका
ते एक इमारत कि, कसकसले
कोर्का, उद्देश कोण कोण है सर्वै
राक सभेंतु निर्णयु कोर्का-सभेंतु
ते विषयाचे पूर्ण अंगानि (पूर्ण
प्रकारान) आलोचन कोर्का-हो
आमगेलो अभिप्रायु.

श्री गंधप्रसादाक्षत पेठैल्या
पुनः शुभाशीर्वादु.

[illegible]

[illegible]



His Holiness Srimad Sudhindra Tirtha Swamiji had great regards for and pride about. the three Konkani Vaidyas. Swamiji's thoughts and advice about erecting a suitable memorial for the Trio is expressed in this letter while replying to poet Saratchandra Shenoi. This letter is in Konkani language

## ಮೂವರು ಕೊಂಕಣಿ ಬ್ರಾಹ್ಮಣ ವೈದ್ಯರಿಗೆ ಸ್ಮಾರಕ





# ಕೊಂಕಣಿ ಪ್ರಮಾಣಪತ್ರ

–ಅನುವಾದ : ಬಿ. ನರಸಿಂಗರಾವ್

स्वस्तिश्री शालिवाहनशाक १५९३ राक्षससंवत्सर चैत्र बहुळ १० को

**ಸ್ವಸ್ತಿ ಶ್ರೀ ಶಾಲಿವಾಹನಶಕ 1593 ರಾಕ್ಷಸ ಸಂವತ್ಸರ ಚೈತ್ರ ಬಹುಳ 10 ಕೊ**

ಸ್ವಸ್ತಿ ಶ್ರೀ ಶಾಲಿವಾಹನ ಶಕ ರಾಕ್ಷಸ ನಾಮ ಸಂವತ್ಸರ 1597 ಚೈತ್ರ ಬಹುಳ ದಶಮಿ ಕೊ

चीराजपाटणीबैसिकेरंगभट्ट तथा विनायकपंडित आपूभट्ट तेगे वैद्य

**ಚೀ ರಾಜಪಾಟಣೀಂ ಬೈಸಿಕೆರಂಗಭಟ್ಟ ತಥಾ ವಿನಾಯಕ ಪಂಡಿತ ಅಪೂಭ್ಟ ತೇಗ ವೈದ್ಯ**

ಚ್ಚಿ ರಾಜಧಾನಿಯಲ್ಲಿ ವಾಸಿಸುವ ರಂಗ ಭಟ್, ವಿನಾಯಕ ಪಂಡಿತ್ ಹಾಗೂ ಅಪ್ಪು ಭಟ್ ಎಂಬೀ ನಾವು ಮೂವರು ವೈದ್ಯರು

तानिंकोचिचाकुमदोर आंद्रिकि फांड्रे त्याचा निरोपान ह्या मलबार देशा

**ತಾನೀಂ ಕೊಚಿಚ್ಯಾ ಕುಮದೋರ್ ಆಂಡ್ರೀ ಫಾಂಡ್ರೇ ತ್ಯಾಚ್ಯಾ ನಿರೋಪಾನ ಹ್ಯಾ ಮಲಬಾರ ದೇಶಾ**

ಕೊಚ್ಚಿಯ ಕುಮುದೋರ (ಕಮಾಂಡರ್)ರಾದ ಅಂದ್ರಿಕಿ ಫಾನ್ಡ್ರೆ ಅವರ ಅನುಮತಿಯಿಂದ ಈ ಮಲಬಾರ್ ಪ್ರದೇಶ

तु आशिले ओषधमात्र वृक्षवालि झाडखंड ओळखतेल्या मनुष्यांक मु

**ತು ಆಶಿಲೆ ಓಷಧ ಮಾತ್ರ ವೃಕ್ಷ, ವಾಲಿ, ಝಾಡಖಂಡ, ಒಳಖತೇಲ್ಯಾ ಮನುಷ್ಯಾಂಕ ಮು**

ದಲ್ಲಿರುವ ಔಷಧ ಸಸ್ಯ–ತರುಲತೆಗಳನ್ನು ಬೇರು–ಚಕ್ಕೆಗಳನ್ನು ಗುರುತಿಸುವಂತಹ ಜನರನ್ನು (ಪರಿಣತರನ್ನು) ಗೌರವ

सारोदेवुनु तेते गांवांतु पेट्टवूनु तिंतिं वोखद आणवूनु त्यात्या झाडाचे फळ

**ಸಾರೊ ದೇವುನು ತೇ ತೇ ಗಾಂವಾಂತು ಪೆಟ್ಟವೂನು ತಿಂ ತಿಂ ವೊಖದಂ ಆಣವೂನು ತ್ಯಾ ತ್ಯಾ ಝಾಡಾಚೆಂ ಫಲ**

ಧನ ನೀಡಿ ಆಯಾ ಊರುಗಳಿಗೆ ಕಳುಹಿಸಿ ಆಯಾ ಔಷಧಮೂಲಿಕೆಗಳನ್ನು ತರಿಸಿ ಆಯಾ ಸಸ್ಯದ ಫಲ,

फूल पानबीज समस्त त्यात्या ऋतुकाळाव संपादूनु तिंतिं चितारिलीं त्या उप

**ಫೂಲ, ಪಾನ, ವೀಜ ಸವಸ್ತ ತ್ಯಾ ತ್ಯಾ ರುತು ಕಾಳಾವ ಸಂಪಾದೂನು ತಿಂ ತಿಂ ಚಿತಾರಿಲಿಂ ತ್ಯಾ ಉಪ**

ಹೂವು, ಎಲೆ, ಬೀಜ ಇವನ್ನೆಲ್ಲಾ ಆಯಾ ಋತುಮಾನದಂತೆ ಸಂಗ್ರಹಿಸಿ ಅವನ್ನೆಲ್ಲಾ ಚಿತ್ರೀಕರಿಸಿ ತದ



रातआमिआमगेल्यावैद्यग्रंथाचानिघंटाप्रमाणीत्यांत्याओषधाचेगुण

ರಾಂತ ಆಮಿ ಅಮಗಲ್ಯಾ ವೈದ್ಯಗ್ರಂಥಾಚ್ಯಾ ನಿಘಂಟಾ ಪ್ರಮಾಣಿ ತ್ಯಾ ತ್ಯಾ ಓಷಧಾಚೆ ಗುಣ

ನಂತರ ನಾವು ನಮ್ಮ ವೈದ್ಯಕೀಯ ಪುಸ್ತಕ–ನಿಘಂಟುಗಳನ್ನು ಆಧರಿಸಿ ಆಯಾ ಔಷಧಗಳ ಗುಣ

वाअनुभवानजोजोगुणआमकांकळेलातोवात्यांत्याओखदांचीनावंपळेउनु

ವಾ ಅನುಭವಾನ ಜೋ ಜೋ ಗುಣ ಆಮಕಾ ಕಳೆಲೊ ತೊ ವಾ ತ್ಯಾ ತ್ಯಾ ಒಖದಾಂಚಿಂ

ನಾವಂ ಪಳೆಉನು

ಅಥವಾ ಅನುಭವದಲ್ಲಿ ಯಾವ ರೀತಿ ಪರಿಣಾಮ ಉಂಟು ಮಾಡುತ್ತವೆ ಎಂದು ದೃಢೀಕರಿಸಿ, ನಮಗೆ ಗೊತ್ತಿರುವ ಅಥವಾ ಆ ಔಷಧಗಳ ಹೆಸರುಗಳನ್ನು ನೋಡಿ

आजिदोनिवर्षंसकाळिसांजेआमिंलागिरावूनुहोलिव्हुसंपादूनदिलातें

ಆಜಿ ದೋನಿ ವರ್ಷಂ ಸಕಾಳಿ ಸಾಂಜೆ ಆಮಿಂ ಲಾಗಿ ರಾವೂನು ಹೋ ಲಿವ್ಹು ಸಂಪಾದೂನು

ದಿಲಾ ತೆಂ

ಕಳೆದೆರಡು ವರ್ಷಗಳಿಂದ ಹಗಲು ರಾತ್ರಿಯೆನ್ನದೆ ನಾವು ಒಡನಿದ್ದು ಈ ಪುಸ್ತಕವನ್ನು ಸಂಪಾದಿಸಿ ಕೊಟ್ಟಿದ್ದೇವೆ ಎಂಬುದಕ್ಕೆ

टिकअशिम्हणुंचाकनजम्हणुआमिंआमचीनिसाणिकर्णुदिली

ಲಟಿಕ ಅಶಿ ಮ್ಹಣುಂಚಾಕ ನಜ ಮ್ಹಣು ಆಮಿಂ ಅಮಚಿ ನಿಸಾಣಿ ಕರ್ಣು ದಿಲೀ

ಅದನ್ನು ಸುಳ್ಳೆನ್ನಬಾರದೆಂದು ನಾವು ನಮ್ಮ ಹಸ್ತಾಕ್ಷರ ಹಾಕಿ ಕೊಟ್ಟಿದ್ದೇವೆ.

तेंसत्यम्हणुमानुचेंजाइदम्हणुनागरबरपानहेंबरवूनुदिलीं श्री

ತೆಂ ಸತ್ಯ ಮ್ಹಣು ಮಾನುಚೆಂ ಜಾಇದ ಮ್ಹಣು ನಾಗರ ಬರಪಾನ ಹೆಂ ಬರವೂನು ದಿಲಾಂ ಶ್ರೀ

ಇದು ನೈಜ ಸಂಗತಿಯಾಗಿದೆ ಎಂಬುದಾಗಿ ದೇವನಾಗರಿ ಲಿಪಿಯಲ್ಲಿ ಇದನ್ನು ಬರೆದು ಕೊಟ್ಟಿದ್ದಾಗಿದೆ. ಶ್ರೀ

| | | |
|---|---|---|
| रंगभटु | विनायकपंडित | आपूचीओप |
| ರಂಗ ಭಟು | ವಿನಾಯಕ ಪಂಡಿತ | ಅಪ್ಪೂಚಿ ಓಪ |
| ರಂಗ ಭಟ್ | ವಿನಾಯಕ ಪಂಡಿತ್ | ಅಪ್ಪು ಭಟ್ |



'ಹೋರ್ತುಸ್ ಮಲಬಾರಿಕುಸ್' ಎಂಬ ಸಸ್ಯ ವರ್ಗೀಕರಣ ಶಾಸ್ತ್ರದ ಮೂಲ ಗ್ರಂಥ ತಯಾರಾದದ್ದು ಕೇರಳದಲ್ಲಿ. ಈ ಗ್ರಂಥ ಅತ್ಯಮೂಲ್ಯ ವೈದ್ಯಕೀಯ ಮಾಹಿತಿಗಳ ಆಕರ ಗ್ರಂಥವಾಗಿದೆ. ಸಸ್ಯ ಶಾಸ್ತ್ರದ ಅಮೂಲ್ಯ ಮಾಹಿತಿಯನ್ನು ಹೊಂದಿರುವ ಈ ಗ್ರಂಥವನ್ನು 1678 ರಿಂದ 1693ರ ನಡುವೆ ಆಗಿನ ಕೊಚ್ಚಿಯ ಡಚ್ ಗವರ್ನರ್ ಆಗಿದ್ದ ಹೆಂಡ್ರಿಕ್ ಆಡ್ರಿಯಾನ್ ವ್ಯಾನ್ ರೀಡ್ ಟೋಟ್ ಡ್ರಾಕೆನ್‌ಸ್ಟೇಯನ್ ಎನ್ನುವವರು ಸಂಸ್ಕರಿಸಿ ಪ್ರಕಟಿಸಿದರು.

'ಹೋರ್ತುಸ್ ಮಲಬಾರಿಕುಸ್' ಬರೆಯುವಾಗ ಗೌಡ ಸಾರಸ್ವತ ಬ್ರಾಹ್ಮಣ ಸಮುದಾಯದ ಕೊಂಕಣಿ ಆಡು ಮಾತಿನವರಾದ ಆಗಿನ ಜನಪ್ರಿಯ ವೈದ್ಯ ರಂಗ ಭಟ್ಟ, ವಿನಾಯಕ ಪಂಡಿತ ಮತ್ತು ಅಪ್ಪು ಭಟ್ಟ ಎಂಬುವವರಿಂದ ಹಾಗೂ ಇಟ್ಟಿ ಅಚ್ಚುದನ್ ಎನ್ನುವ ಮಲಯಾಳಿ ವೈದ್ಯರಿಂದ ಮಾಹಿತಿಯನ್ನು ಮೌಖಿಕ ರೂಪದಲ್ಲಿ ಹೇಳಿ ಅದನ್ನು ಕೂಲಂಕುಷ ಪರೀಕ್ಷೆಗೊಳಪಡಿಸಿ ಬಳಿಕ ಲ್ಯಾಟೀನ್ ಭಾಷೆಗೆ ತರ್ಜುಮೆಗೊಳಿಸಿ ಕೃತಿಯನ್ನು ಪ್ರಕಟಿಸಲಾಯಿತು.

ಪೂಜ್ಯ ಶ್ರೀಮದ್ ಭುವನೇಂದ್ರ ತೀರ್ಥ ಸ್ವಾಮೀಜಿಯವರು ತಮ್ಮ ಸೇವಾಸ್ಥಾನದಿಂದ ಧಾರ್ಮಿಕ, ಶೈಕ್ಷಣಿಕ, ಸಂಸ್ಕೃತ, ಆಯುರ್ವೇದ ಮತ್ತು ಶಿಲ್ಪಕಲೆಗಳ ಕ್ಷೇತ್ರಗಳಿಗೆ ತಮ್ಮ ಸೇವೆ ಸಲ್ಲಿಸಿದ್ದರು. ಶ್ರೀಮದ್ ಭುವನೇಂದ್ರ ತೀರ್ಥರು ಮಾತ್ರವಲ್ಲದೇ ಅನೇಕ ಪೂಜನೀಯ ಯತಿಗಳು ಆಯುರ್ವೇದದ ಮಹಾನ್ ವೈದ್ಯರುಗಳಾಗಿದ್ದರು.

website : www.pgkamathfoundation.com
email : pgkamat.foundation@gmail.com

₹60/-